ಫಲಜ್ಯೋತಿಷ್ಯ–ಜ್ಯೋತಿರ್ಮಾಲಾ ನಕ್ಷತ್ರ : ೫

# ಆಕಸ್ಮಿಕ ಧನಯೋಗ

ಲೇಖಕ ಮತ್ತು ಪ್ರಕಾಶಕ :
ಎನ್. ಕೆ. ಜೋಗಳೇಕರ
ತೇಜಸ್ವಿ ನಗರ, ಧಾರವಾಡ – ೫೮೦ ೦೦೨

ಪ್ರಥಮ ಮುದ್ರಣ : ನವ್ಹೆಂಬರ ೧೯೬೦
ದ್ವಿತೀಯ ಮುದ್ರಣ : ಮೇ ೧೯೬೮
ತೃತೀಯ ಮುದ್ರಣ : ಅಗಷ್ಟ ೧೯೭೨
ಚತುರ್ಥ ಮುದ್ರಣ : ಅಕ್ಟೋಬರ ೧೯೮೩

ಮುದ್ರಕರು :
ಕೃಪಾ ಮುದ್ರಣ
ಧಾರವಾಡ

[ ಬೆಲೆ : ಆರು ರೂಪಾಯಿ ]

# ಅ ರ್ಪ ಣೆ

ಮಾತೃವಾತ್ಸಲ್ಯದ ಅಮೃತಧಾರೆಯನ್ನು ಅವಿರತವಾಗಿ ಸುರಿಸಿ,
ನನ್ನ ದೇಹ ಮನಗಳನ್ನು ಪೋಷಿಸಿದ ನನ್ನ ತಾಯಿ
ಸ್ವರ್ಗವಾಸಿ ಉಮಾಬಾಯಿಯವರಿಗೆ.
ಈ ಕೃತಿಯು ಪ್ರೀತ್ಯಾದರಗಳಿಂದ ಸಮರ್ಪಿತವಾಗಿದೆ.

—ನಾಗನಾಥ

# ಪ್ರಥಮ ಮುದ್ರಣದ ಅರಿಕೆ

ಫಲ ಜ್ಯೋತಿಷ್ಯ ಜ್ಯೋತಿರ್ಮಾಲೆಯ ೫ನೇಯ ನಕ್ಷತ್ರವಾದ 'ಆಕಸ್ಮಿಕ ಧನಯೋಗ' ಎಂಬ ಈ ಚಿಕ್ಕ ಹೊತ್ತಿಗೆಯನ್ನು ಸಹೃದಯರಾದ ಕನ್ನಡ ವಾಚಕರಿಗೆ ಒದಗಿಸುವಂಥ ಸುಯೋಗ ಬಂದದ್ದಕ್ಕೆ ಆನಂದವೆನಿಸುತ್ತದೆ.

ಇದು ನನ್ನ ೫ನೇಯ ಹೊತ್ತಿಗೆ. ಸುಮಾರು ಮೂರು ವರ್ಷಗಳಲ್ಲಿ ಇಷ್ಟು ಪುಸ್ತಕ ನಾನು ಬರೆದೆ ಎನ್ನುವದಕ್ಕಿಂತ ವಾಚಕರು ನನ್ನಿಂದ ಬರೆಸಿದ್ದಾರೆಂದು ಹೇಳಿದರೆ ಹೆಚ್ಚು ಸಮಂಜಸವಾಗುವುದು. ಕೇವಲ ಲಘು ಸಾಹಿತ್ಯವನ್ನು ಓದುವ ಈ ಕಾಲದಲ್ಲಿ ಶಾಸ್ತ್ರೀಯ ಗ್ರಂಥ ಬರೆಯುವದು ಹಾಗೂ ಪ್ರಕಟಿಸುವದೆಂದರೆ ಧಾರ್ಷ್ಟ್ಯದಮಾತೇ ಎಂದೆನ್ನಬಹುದು. ಕೊಂಡು ಓದುವ ಪ್ರವೃತ್ತಿ ಕಡಿಮೆ ಇದೆ ಎಂಬ ಕೂಗಂತೂ ಇದ್ದೇ ಇದೆ. ಮೊದಲನೇಯ ಪುಸ್ತಕ ಪ್ರಕಟಿಸುವಾಗ ಇದ್ದ ನಿರಾಶೆ ಮುಂದೆ ತೊಲಗಿತಲ್ಲದೇ ಓದುವ ಜನ ಇದ್ದಾರಲ್ಲ ಎಂಬ ಸಮಾಧಾನವಾಯಿತು. ಸದ್ಯಕ್ಕೆ ಒಂದೆರಡು ಪುಸ್ತಕಗಳು ಎರಡನೇ ಆವೃತ್ತಿಯಲ್ಲಿವೆ.

ಇದೇ ಸಂದರ್ಭದಲ್ಲಿ ಒಂದು ಮಾತು ಹೇಳುವದು ಅವಶ್ಯವಿದೆ. ಕನ್ನಡ ನಾಡಿನ ಪ್ರಮುಖ ಪತ್ರಿಕೆಗಳೆಲ್ಲ ಕಾಲ ಕಾಲಕ್ಕೆ ನನ್ನ ಪುಸ್ತಕಗಳ ವಿಮರ್ಶೆಯನ್ನು ವಿವರವಾಗಿ ತೀವ್ರವಾಗಿ ಹಾಗೂ ಪ್ರೋತ್ಸಾಹ ಪರವಾಗಿ ಮಾಡಿದ್ದನ್ನು ನೆನೆಯುವೆ. ಮತ್ತು ನಾನು ಆಯಾ ಪತ್ರಿಕೆಗಳ ಸಂಪಾದಕರಿಗೆ ಉಪಕೃತನಾಗಿರುವೆ.

ಪ್ರಸ್ತುತ ಈ ಪುಸ್ತಕವನ್ನು ಬರೆಯಲು ವಾಚಕವೃಂದದವರೇ ಕಾರಣರೆಂಬ ಮಾತನ್ನು ಮತ್ತ ಹೇಳಬಯಸುವೆ. ಈಗ ಪ್ರಚಲಿತವಾಗಿರುವ ಪ್ರಾಯಿಜಬಾಂಡ, ರೇಸ, ಸಟ್ಟಾ, ಲಾಟರಿ, ದತ್ತಕ, (ವಾರ್ಸಾ) ಬಕ್ಷೀಸ, ಮೃತ್ಯುಪತ್ರ ಮುಂತಾದವುಗಳ ಬಗ್ಗೆ ಒಂದು ಹೊತ್ತಿಗೆಯನ್ನು ಬರೆಯಲು ಅನೇಕ ಪತ್ರಗಳು ಬಂದಿದ್ದವು. ಈ ಎಲ್ಲ ವಿಷಯಗಳನ್ನಿಲ್ಲಿ ಚರ್ಚಿಸಿರುವೆ. ಇವುಗಳ ಪ್ರಚಾರವು ಪುಸ್ತಕದ ಉದ್ದೇಶವಲ್ಲ; ಆದರೆ ಶಾಸ್ತ್ರೀಯ ದೃಷ್ಟಿಯಿಂದ ಇವುಗಳನ್ನು ಪಡೆಯುವಂಥ ಯೋಗಾಯೋಗಗಳ ಬಗ್ಗೆ ಚರ್ಚಿಸಿರುವೆ.

ನನ್ನ ಪರಮ ಸ್ನೇಹಿತರಾದ ಪ್ರೊ. ಜಿ. ವ್ಹಿ. ಕುಲಕರ್ಣಿ, ಎಮ್. ಎ. ಶ್ರೀ ಎಸ್. ಎಸ್. ಪಾಟೀಲ, ಎಂ.ಎ. ಶ್ರೀ ಎಮ್. ಬಿ. ಪಾಂಡೆ, ಶ್ರೀ ಜಿ. ಚಂದ್ರಶೇಖರರು ಕಾಲಕಾಲಕ್ಕೆ ನೀಡುತ್ತ ಬಂದ ಬಹುಮುಖದ ಸಹಾಯಕ್ಕಾಗಿ ನಾನು ಅವರಿಗೆಲ್ಲ ಋಣಿಯಾಗಿದ್ದೇನೆ.

ಈ ಪುಸ್ತಕಕ್ಕೆ ಸ್ವಲ್ಪ ಸಮಯದಲ್ಲಿ ಅಂದವಾದ ಮುಖಚಿತ್ರವನ್ನು ಚಿತ್ರಿಸಿದ ಹಾಗೂ ಬಹುಮುಖದಿಂದ ಸಹಾಯವನ್ನು ಸಲ್ಲಿಸಿದ ಉದಯೋನ್ಮುಖ ಕಲಾವಿದರಾದ ಶ್ರೀ ಎಸ್. ಜಿ. ಇಟಗಿಯವರಿಗೆ ಹಾಗೂ ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ರವೀಂದ್ರ ಫಾಣೀಕರ ಅವರಿಗೆ ನಾನು ಕೃತಜ್ಞನಾಗಿರುವೆ. ನನ್ನ ಉಳಿದ ಕೃತಿಗಳಂತೆ ಈ ಹೊಸ ಹೊತ್ತಿಗೆಯನ್ನು ಆದರದಿಂದ ವಾಚಕರು ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

### ಎರಡನೆಯ ಆವೃತ್ತಿ ಕುರಿತು

"ಆಕಸ್ಮಿಕ ಧನಯೋಗ" ಪುಸ್ತಕದ ಮೊದಲ ಮುದ್ರಣದ ಪ್ರತಿಗಳು ಮುಗಿದು ಅನೇಕ ವರ್ಷಗಳಾಗಿದ್ದು ಅನೇಕ ಜನರಿಂದ ಹೆಚ್ಚಿನ ಪ್ರತಿಗಳಿಗೆ ಬೇಡಿಕೆ ಬಂದಿದ್ದರೂ ಸಹ ಈ ವರೆಗೆ ದ್ವಿತೀಯ ಮುದ್ರಣವನ್ನು ಕೈಕೊಳ್ಳಲು ಸಾಧ್ಯವಾಗಿರಲಿಲ್ಲ. ಆದರೆ ಶ್ರೀ ಆರ್. ಬಿ. ವೈದ್ಯರ ಸಹಕಾರದಿಂದ ಇದೀಗ ಪ್ರಕಟಿಸಲು ಸಾಧ್ಯವಾಯಿತು. ಶ್ರೀ ವೈದ್ಯರಿಗೆ ನನ್ನ ಕೃತಜ್ಞತೆ ಸಲ್ಲುತ್ತದೆ.

### ತೃತೀಯ ಮುದ್ರಣವನ್ನು ಕುರಿತು

"ಆಕಸ್ಮಿಕ ಧನಯೋಗ" ಗ್ರಂಥದ ದ್ವಿತೀಯ ಮುದ್ರಣದ ಪ್ರತಿಗಳು ಮುಗಿದು ವರ್ಷವಾಯಿತು. ಅನೇಕ ಜ್ಯೋತಿಷ್ಯ ಅಭಿಮಾನಿಗಳಿಂದ ಮೇಲಿಂದ ಮೇಲೆ ಪ್ರತಿಗಳಿಗಾಗಿ ಬಿನ್ನಹ ಬರುತ್ತಿದ್ದುದು. ಈ ಪುಸ್ತಕದ ಬಗೆಗೆ ಓದುಗರು ತೋರಿದ ಆಸಕ್ತಿ ಈ ತೃತೀಯ ಮುದ್ರಣಕ್ಕೆ ಕಾರಣವಾಗಿದೆ. ಈ ಪುಸ್ತಕದ ಪತ್ಯ ಭಾಗವನ್ನು ಮುದ್ರಿಸಿಕೊಟ್ಟ ಶ್ರೀ ಆರ್.ಬಿ.ವೈದ್ಯರಿಗೂ ರಕ್ಷಾಪತ್ರವನ್ನು ಮುದ್ರಿಸಿಕೊಟ್ಟ ಪ್ರತಿಭಾ ಮುದ್ರಣಾಲಯದ ಶ್ರೀ ಮನೋಹರ ರವೀಂದ್ರ ಫಾಣೀಕರ ಬಂಧುದ್ವಯರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

### ಚತುರ್ಥಾವೃತ್ತಿಯನ್ನು ಕುರಿತು

"ಆಕಸ್ಮಿಕ ಧನಯೋಗ" ಪುಸ್ತಕದ ತೃತೀಯ ಮುದ್ರಣದ ಪ್ರತಿಗಳು ಮುಗಿದು ಹಲವು ವರುಷಗಳಾಗಿದ್ದು ಅನೇಕ ಜನರಿಂದ ಪ್ರತಿಗಳಿಗಾಗಿ ಬೇಡಿಕೆ ಹೆಚ್ಚಿಗೆ ಬಂದಿದ್ದರೂ ಸಹ ಈ ವರೆಗೆ ಚತುರ್ಥ ಮುದ್ರಣವನ್ನು ಕೈಕೊಳ್ಳಲು ಸಾಧ್ಯವಾಗಿರಲಿಲ್ಲ ಆದರೆ ಕೃಪಾ ಮುದ್ರಣಾಲಯದ ಒಡೆಯರಾದ ಶ್ರೀ ಎನ್. ಕೆ ಪೋತೀ:ಸರ ಸಹಕಾರದಿಂದ ಇದೀಗ ಪ್ರಕಟಿಸಲು ಸಾಧ್ಯವಾಯಿತು. ಅದಕ್ಕಾಗಿ ಅವರಿಗೆ ಕೃತಜ್ಞತೆ ಸಲ್ಲಿಸುತ್ತೇನೆ.

೧೬-೧೦-೧೯೮೩ (ವಿಜಯದಶಮಿ)

ಎನ್. ಕೆ. ಜೋಗಳೇಕರ
ತೇಜಸ್ವೀನಗರ ಧಾರವಾಡ-೨

# ಆಕಸ್ಮಿಕ ಧನಯೋಗ

## ವಿಷಯ ಪ್ರವೇಶ

ಮನುಷ್ಯ ಬುದ್ಧಿವಂತ ಪ್ರಾಣಿ ಆದುದರಿಂದಲೇ ಈ ಭೂಮಿಯನ್ನು ಕರತಲಾಮಲಕದಂತೆ ಆಳುತ್ತಿದ್ದಾನೆ. ಪ್ರಾಣಿಯಲ್ಲಿರುವ ಎಲ್ಲ ಭಾವನೆಗಳು ಮನುಷ್ಯನಲ್ಲಿವೆ. ಹಸಿವೆ, ನಿದ್ರೆ, ಭಯ ಹಾಗೂ ಇಂದ್ರಿಯ ಸೌಖ್ಯ ಎಲ್ಲವೂ ಸಮಾನವಾಗಿಯೇ ಇವೆ. ಮನುಷ್ಯ ತನ್ನ ಅನ್ನವನ್ನು ಕೂಡಿಡುವಂತೆ ಪ್ರಾಣಿಗಳೂ ಕೂಡ ತಮ್ಮ ಅನ್ನವನ್ನು ಕೂಡಿಡುತ್ತವೆ. ಮಕ್ಕಳ ಮೇಲಿನ ಮಮತೆ ಮನುಷ್ಯನಷ್ಟೇ ಪ್ರಾಣಿಗಳಿಗೂ ಇದೆ. ಸಂಕಟದಲ್ಲಿ ಅವೂ ಅಳುತ್ತವೆ. ಹೈನಾ ಎಂಬ ಪ್ರಾಣಿ ನಗುತ್ತದೆ ಕೂಡ. ಆದರೆ ಪ್ರಾಣಿಗಳಲ್ಲಿ ಅರ್ಥದ (ಹಣದ) ವ್ಯಾಪಾರವೇ ಕಂಡು ಬರುವದಿಲ್ಲ.

ಇಂದು ಅರ್ಥಶಾಸ್ತ್ರ ಅಪಾರವಾಗಿ ಬೆಳೆದಿದೆ. ಹಣವನ್ನು ಗಳಿಸುವ ನವವಿಧಾನಗಳು ಶೋಧನೆಗೊಂಡಂತೆ ಅದನ್ನು ವಿನಿಯೋಗಿಸುವ ಮುಖಗಳು ಬೆಳೆದಿವೆ. ಇಂದು ಮನುಷ್ಯನ ಬಾಳಿಗೆ ಏನಾದರೂ ಅರ್ಥ ಬರಬೇಕಾದರೆ ಈ ಅರ್ಥ ಬೇಕು. ನಾವು ಗಳಿಸಬೇಕಾದ ಪುರುಷಾರ್ಥ, ಧರ್ಮ, ಅರ್ಥ, ಕಾಮ, ಮೋಕ್ಷ. ಇದರಲ್ಲಿ ಕೊನೆಯದು ನಾವು ಇಲ್ಲಿಂದ ತೆರಳಿದ ಮೇಲೆಯೇ ಪಡೆಯಬಹುದು. ಆದ್ದರಿಂದ ಇಹಲೋಕದಲ್ಲಿ ನಾವು ಪಡೆಯುವ ಸುಖಗಳು ಧರ್ಮ, ಅರ್ಥ, ಕಾಮಕ್ಕೆ ಸಂಬಂಧಿಸಿದವುಗಳು. "ಅರ್ಥ ಮೂತಾಂ ಧರ್ಮ ಕಾಮತಾಂ" ಎಂಬ ಮಾತಿನಂತೆ ನೋಡಿದರೆ ಧರ್ಮ ಹಾಗೂ ಕಾಮಕ್ಕೆ ಅರ್ಥವೇ ಮೂಲವೆಂದು ಗೊತ್ತಾಗುತ್ತದೆ. ಇದರಿಂದ ಇದರ ಮಹತ್ವ ಎಷ್ಟು ಎಂಬುದು ವಿದಿತವಾಗುತ್ತದೆ. ಹಣವಿಲ್ಲದವನ ಸ್ಥಿತಿಯನ್ನು ಬಣ್ಣಿಸುವದು ಅಸಾಧ್ಯ. ಅದನ್ನೇ ಸುಭಾಷಿತಕಾರರು ಹೀಗೆ ಹೇಳಿದ್ದಾರೆ :

ಮಾತಾ ನಿಂದತಿ ನಾಭಿನಂದತಿ ಪಿತಾ ಭ್ರಾತಾನ ಸಂಭಾಷತೆ
ಭೃತ್ಯಃ ಕುಪ್ಯತಿ ನಾತು ಗಚ್ಛತಿ ಸುತಃ ಕಾಂತಾ ಚ ನಾಲಿಂಗ್ಯತೆ
ಅರ್ಥಃ ಪ್ರಾರ್ಥನ ಶಂಕಯಾನ ಕುರುತೆ ಸಂಭಾಷಣಂ ವೈಸುಹೃತ್
ತಸ್ಮಾತ್ ದ್ರವ್ಯ ಮುಪಾರ್ಜಯೇತ್ಮಣ ಸಖೇ ದ್ರವೇಣ ಸರ್ವೇ ವಶಾಃ

ಇಂದು ನಮ್ಮ ಪ್ರಥ್ವಿಯು ಯಾವುದರ ಸುತ್ತು ತಿರುಗುತ್ತದೆ ಅಂತಾ ಒಬ್ಬ ಬಾಲಕನಿಗೆ ಕೇಳಲಾಗಿ ರೂಪಾಯಿಯಂತೆ ಗೋಲಾಕಾರವಾಗಿ ತಿರುಗುತ್ತದೆ ಅಂತ ಹೇಳಿದನು. ಇದು ಎಂತಹ ಅರ್ಥಪೂರ್ಣವಾದ ಮಾತು ಎಂಬುದನ್ನು ಸರಳವಾಗಿ ತಿಳಿಯಬಹುದಾಗಿದೆ. ಇಂದಿನ ಜೀವನದಲ್ಲಿ ಹಣವು ಗಳಿಸಿದ ಸ್ಥಾನಮಾನಗಳು ಕಲ್ಪನಾತೀತವಾಗಿವೆ. ನಮ್ಮ ಜೀವನವಿಂದು ದ್ರವ್ಯಾಧೀನವಾಗಿಬಿಟ್ಟಿದೆ. ಶಿಕ್ಷಣ, ನೌಕರಿ, ವ್ಯವಹಾರ ಯಾವುದೇ ತೆಗೆದುಕೊಂಡರೂ ಹಣದ ಅವಶ್ಯಕತೆಯು ತಾಂಡವವಾಡತೊಡಗುತ್ತವೆ. ಮಕ್ಕಳು ಎಷ್ಟೇ ಬುದ್ಧಿವಂತರಿರಲಿ ಅವರನ್ನು ಇಂಜನೀಯರರನ್ನಾಗಿ ಮಾಡಬೇಕಾದರೆ ಐವತ್ತು ಸಾವಿರ ರೂಪಾಯಿ ತೆಗೆದಿಡಬೇಕು. ಡಾಕ್ಟರರನ್ನಾಗಿ ಮಾಡಲು ಒಂದುಲಕ್ಷ ಸಾವಿರ ಮುಡುಪಿಡಬೇಕು. ಇದಲ್ಲದೆ ಸೀಟು ಕಾಯ್ದಿರಿಸಲು ೫೦–೬೦ ಸಾವಿರ ರೂಪಾಯಿ ದಕ್ಷಿಣೆ ಬೇರೆ ಕೊಡಬೇಕು. ಇನ್ನು ನೌಕರಿಯ ಸಲುವಾಗಿ ಎಷ್ಟು ಹಣ ವೆಚ್ಚ ಮಾಡಬೇಕಾಗುತ್ತದೆಂಬುದನ್ನು ತಿಳಿಯಬೇಕಾದರೆ ನಿರುದ್ಯೋಗಿ ಸುಶಿಕ್ಷಿತರನ್ನೇ ಕೇಳಬೇಕು.

ಇಂದಿನ ದೈನಂದಿನ ಜೀವನದಲ್ಲಿ ಹಣವು ಎಷ್ಟೊಂದು ಮಹತ್ವವನ್ನು ವಹಿಸುತ್ತದೆಂಬುದನ್ನು ನಾವು ಕಣ್ಣಾರ ಕಾಣುತ್ತಲಿದ್ದೇವೆ. ಮಗಳಿಗೆ ವರ, ಮಗನಿಗೆ ನೌಕರಿ ದೊರೆತರೆ ತಂದೆ-ತಾಯಿಗಳು ಕೃತಾರ್ಥರೆಂದೇ ತಿಳಿಯುತ್ತಾರೆ. ಹಣವಿದ್ದವರು ಎಂತಹ ಕನ್ಯೆಯನ್ನೂ ಖರ್ಚು ಮಾಡಬಹುದು. ಎಂತಹ ಧಡ್ಡ ಮಗನಿಗೂ ನೌಕರಿ ಕೊಡಿಸಬಹುದು. ಆದರೆ ಮಧ್ಯಮ ತರಗತಿಯ ಜನರು ಈ ತಿರುಗಣೆಯ ಮಡುವಿನಲ್ಲಿ ಸಿಲುಕಿ ಕೊನೆಯವರೆಗೂ ಹಣದ ಸ್ಥಿರತೆ ಪಡೆಯದೆ ಅದರಲ್ಲಿಯೇ ತೊಳಲಾಡುತ್ತಾರೆ. ಅವರಿಗಿರುವ ಸಮಸ್ಯೆಗಳಲ್ಲೆಲ್ಲ ಆರ್ಥಿಕ ವಿಷಯದವುಗಳೇ ಹೆಚ್ಚಾಗಿರುತ್ತವೆ. ಆದುದರಿಂದ ಈ ಆರ್ಥಿಕ ಸ್ಥಿತಿಗತಿಯು ಮನುಷ್ಯನ ಕೇಂದ್ರ ಸಮಸ್ಯೆಯಾಗಿ ಪರಿಣಮಿಸಿದೆ.

## ದೈವಜ್ಞನ ಮಹತ್ವ

ಮಾನವನ ಜೀವನದಲ್ಲಿಯ ಅತ್ಯಂತ ಮಹತ್ವದ ವಿಷಯವಾದ ದ್ರವ್ಯಕ್ಕೂ ಜ್ಯೋತಿಷಿಗೂ ಇರುವ ಸಂಬಂಧ ಬಹಳೇ ಸ್ವಾಭಾವಿಕವಾದದ್ದು. ಸಲಹೆ ಪಡೆಯಲು ಬಂದವರಲ್ಲಿ ನೂರಕ್ಕೆ ೯೦ರಷ್ಟು ಜನ ತಮ್ಮ ಆರ್ಥಿಕ ಪರಿಸ್ಥಿತಿಯು ಎಂದು ಸುಧಾರಿಸುವದೆಂಬುದನ್ನು ಕೇಳುವವರೇ ಆಗಿರುತ್ತಾರೆ. ಸಂಜೆಯ ಊಟಕ್ಕೆ ಗತಿಯಿಲ್ಲದವನಿಂದ ಹಿಡಿದು ಲಕ್ಷಾಧೀಶನ ವರೆಗೂ ಈ ಸಮಸ್ಯೆಯು ಇದ್ದೇ ಇರುತ್ತದೆ. ಬಡವ ಬಂದು ಸಂಜೆ ಬೇಳೆಬೇಯಿಸಲು ಒಂದೆರಡು ರೂ. ಕೊಟ್ಟಾರೇ (ಸಿಗಬಹುದೇ) ಅಂತಾ ಪ್ರಶ್ನೆ ಕೇಳಿದರೆ ಅದಕ್ಕೂ ಮಧ್ಯಮ ವರ್ಗದವರು ನಾಳೆ ನನ್ನ ಕಾಲೇಜ ಫಾರ್ಮ ತುಂಬಲು ಹಣದ ಅನುಕೂಲ ವಾದೀತೇ ಎಂದು ಕೇಳುತ್ತಾನೆ. ಇನ್ನು ಸಿರಿವಂತರಿದ್ದವರು ಮನೆ ಕಟ್ಟಿಸಲೋ ಕಾರು ಮೊದಲಾದ ವಾಹನ ಕೊಳ್ಳಲು ಹಣದ ಅನುಕೂಲವಾದೀತೇ ಎಂದು ಕೇಳುವದುಂಟು.

ದೇಹಕ್ಕೆ ಅನಾರೋಗ್ಯವಾದರೆ ಡಾಕ್ಟರರ ಕಡೆಗೆ ಧಾವಿಸಿ ಅವರ ಸಲಹೆ ಪಡೆಯಬಹುದು, ಕೋರ್ಟಕಚೇರಿಯ ಅಥವಾ ಯಾವುದೇ ಗಂಡಾಂತರ ಕೆಲಸವಿದ್ದರೆ ವಕೀಲರ ಸಲಹೆ ಪಡೆಯಬಹುದು. ಆದರೆ ಮನಸ್ತಾಪವಿದ್ದರೆ ದೈವಜ್ಞನನ್ನು ಕೇಳದೆಯೇ ಗತಿಯಿಲ್ಲ. ಮನುಷ್ಯ ಯಾವಾಗಲೂ ಬದುಕುವುದು ಆಶಾವಾದದ ಮೇಲೆಯೇ ಮುಂದೆ ಒಳ್ಳೆಯದಾಗುತ್ತದೆ ಎಂಬ ಭರವಸೆಯ ಮೇಲೆಯೇ ನಾವು ಇಂದು ನಮ್ಮ ಬದುಕನ್ನು ದೂಡುವೆವು. ನಾಳೆ ಅನ್ನ ಸಿಗುತ್ತದೆ ಎಂಬ ಭರವಸೆಯ ಮೇಲೆ ಇಂದು ಉಪವಾಸವನ್ನು ನಗು ನಗುತ್ತ ಎದುರಿಸುವೆವು. ಆದ್ದರಿಂದ ಮನುಷ್ಯನಿಗೆ ಮಾನಸಿಕ ಸಮಸ್ಯೆ ಮುಖ್ಯವಾಗಿ ಆರ್ಥಿಕ ವಿಷಯದ ಬಗ್ಗೆ ಜ್ಯೋತಿಷಿಗಳ ಸಲಹೆ ಅತ್ಯವಶ್ಯವೆಂದು ಎನಿಸತೊಡಗಿದ್ದು ಅಚ್ಚರಿಯ ಮಾತಲ್ಲ.

## ದ್ರವ್ಯಯೋಗ

ಜಾತಕದಲ್ಲಿ ನೋಡಲಾಗುವ ಅನೇಕ ಯೋಗಗಳಲ್ಲಿ ದ್ರವ್ಯಯೋಗವು ಒಂದು. ಈ ಯೋಗದಲ್ಲಿ "ಆಕಸ್ಮಿಕ ದ್ರವ್ಯಯೋಗ" ಬಹಳೇ ಮಹತ್ವದ ಪಾತ್ರವನ್ನು ವಹಿಸುತ್ತಲಿದೆ. ಈ ದ್ರವ್ಯಯೋಗಕ್ಕೆ ವಯಸ್ಸು, ಶಿಕ್ಷಣ,

ಪ್ರಭಾವ, ವಶೀಲಿ, ಪ್ರಚಾರ ಯಾವುದೂ ಮಹತ್ವದಲ್ಲ. ಅದು ಮನುಷ್ಯನಿಡೆಗೆ ಹೇಗೆ ಬರುತ್ತದೆ ಹೇಳಲು ಬರುವದಿಲ್ಲ. ಆದುದರಿಂದಲೇ ನಮ್ಮವರು ತಿಪ್ಪೆ ಉಪ್ಪರಿಗೆಯಾಗಬಹುದೆಂದರು. ಇಂದು ಭಿಕಾರಿಯಾಗಿ ಬೀದಿಯಲ್ಲಿ ಅಲೆದಾಡುತ್ತಿರುವವನು ನಾಳೆ ಕಾರಿನಲ್ಲಿ ಮೆರೆದಾಡಬಹುದು. ಇದಕ್ಕೆಲ್ಲ ಯೋಗವೇ ಕಾರಣ. ಯೋಗವಿಲ್ಲದೇ ಇದ್ದಾಗ ಏನು ಮಾಡಿದರೂ ಒಂದು ಕವಡೆ ಕೂಡ ದೊರೆಯುವದಿಲ್ಲ. ಎಷ್ಟೋ ಶಿಕ್ಷಣ ಪ್ರತಿಷ್ಠೆ ಇದ್ದರೂ ಎಲ್ಲವು ನಿರುಪಯೋಗಿಯಾಗಿ ಪರಿಣಮಿಸುತ್ತದೆ. ಬೇಕಾದಷ್ಟು ಕಲಿತಂಥ ಬುದ್ಧಿವಂತರಾದ ಡಾ॥ ಜೋಸೆಫ್‌ರಂತಹರೂ ಆರ್ಥಿಕ ಪರಿಸ್ಥಿತಿಯಲ್ಲಿ ತೊಳಲಾಡಿ ಆತ್ಮಹತ್ಯ ಮಾಡಿಕೊಳ್ಳಬಹುದು.

ಈ ದ್ರವ್ಯಯೋಗವು ಮನುಷ್ಯನ ಜಾತಕದಲ್ಲಿ ( ಕುಂಡಲಿ ) ಅಷ್ಟೇ ಏಕೆ ರಾಷ್ಟ್ರಗಳ, ಪ್ರಾಂತಗಳ, ಪಟ್ಟಣಗಳ ಜಾತಕದಲ್ಲಿಯೂ ಕೂಡ ಮಹತ್ವದ ಕಾರ್ಯ ಮಾಡುತ್ತದೆ. ಭಾರತ ಸರ್ಕಾರಕ್ಕೆ ಪ್ರಾಯಿಜ ಬೊಂಡಿನಿಂದ ಅಪಾರ ಹಣ ಸಂಕಲಿತವಾದದ್ದು ಇದೂ ಒಂದು ಆಕಸ್ಮಿಕ ದ್ರವ್ಯಯೋಗದ ಬಗ್ಗೆ ವಿವರವಾಗಿ ಚರ್ಚಿಸಿ ಜನಸಾಮಾನ್ಯರಿಗೂ ಕೂಡ ತಮ್ಮ ಜಾತಕದಲ್ಲಿ ಈ ದ್ರವ್ಯಯೋಗವಿದೆಯೋ ಇಲ್ಲವೋ ಎಂಬುದನ್ನು ನೋಡಿಕೊಳ್ಳಲು ಅನುಕೂಲವಾಗುವಂತೆ ಬರೆಯಲಾಗಿದೆ.



# ಜ್ಯೋತಿಷ್ಯದ ಮೂಲಭೂತ ಸಿದ್ಧಾಂತಗಳು

"ಆಕಸ್ಮಿಕ ದ್ರವ್ಯಯೋಗ" ನಮ್ಮ ಪಾಲಿಗೆ ಇದೆಯೋ ಇಲ್ಲವೋ ಎಂಬು ದನ್ನು ತಿಳಿಯುವ ಮೊದಲು ಜ್ಯೋತಿಷ್ಯದ ಮೂಲಭೂತ ಸಿದ್ಧಾಂತಗಳನ್ನು ಅರಿಯುಬೇಕಾಗುತ್ತದೆ. ಈ ಜ್ಯೋತಿಷ್ಯದ ಮೂಲಭೂತ ಸಿದ್ಧಾಂತಗಳಿಗಾಗಿ ನಮ್ಮ 'ಸಾಡೇಸಾತಿ' ಎಂಬ ಗ್ರಂಥದ ಮೂರನೇ ಪ್ರಕರಣದ ೮ನೇ ಪುಟದಿಂದ ೨೭ನೇ ಪುಟದ ವರೆಗೆ ಪೂರ್ಣವಾಗಿ ವಿವೇಚಿಸಲಾಗಿದೆ. ಪ್ರಸ್ತುತ ಪ್ರಕರಣ ದಲ್ಲಿ ಈ ವಿಷಯಕ್ಕೆ ಬೇಕಾಗುವ ಮೂಲಭೂತ ಸಿದ್ಧಾಂತಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ಆಕಸ್ಮಿಕ ದ್ರವ್ಯಯೋಗದ ಬಗ್ಗೆ ತಿಳಿಯುವ ಮೊದಲು ವಿಚಾರಿಸತಕ್ಕಂಥ ಎರಡನೇ ಮುಖ್ಯ ವಿಷಯುವೇನೆಂದರೆ ಆಕಸ್ಮಿಕ ದ್ರವ್ಯಯೋಗವನ್ನು ನಾವು ಪಡೆದುಕೊಂಡು ಬಂದೇವೋ ಹೇಗೆ ಮೊದಲು ನೋಡಿಕೊಂಡು ಖಾತ್ರಿಮಾಡಿ ಕೊಂಡು ಆ ಮೇಲೆ ಪ್ರಯತ್ನಿಸಬೇಕು. ಏಕೆಂದರೆ ಯಾವ ಸಂಗತಿಯು ಜನ್ಮಾರಭ್ಯ ಸಂಸ್ಕಾರ ರೂಪದಿಂದ ಇಲ್ಲವೋ ಅದು ಗ್ರಹಗಳ ಗೋಚರಿಯಿಂದ ಎಷ್ಟೋ ಶುಭವಿದ್ದಾಗ್ಯೂ ದೊರಕಲಾರದು. ಯಾವುದರ ಬಗ್ಗೆ ಲವಲೇಶ ವಾದರೂ ಕಡಿಮೆಯಿಲ್ಲವೋ ಅದು ಗೋಚರಿಯಿಂದ ಗ್ರಹಗಳು ಎಷ್ಟೇ ಅಶುಭದಾಯಕ ಬಂದರೂ ಸಾಡೇಸಾತಿ, ಪಂಚಮ ಶನಿ ಮೊದಲಾದ ಅನಿಷ್ಟ ಕಾಲ ಬಂದರೂ ಆ ವಿಷಯದ ಬಗ್ಗೆ ಸ್ವಲ್ಪವೂ ಕೂಡ ಕಡಿಮೆಯಾಗಲಾರದು. ಉದಾಹರಣೆ: ಯಾರೊಬ್ಬನ ಜಾತಕದಲ್ಲಿ ಆಕಸ್ಮಿಕ ಧನಯೋಗ ಇಲ್ಲವೇ ಇಲ್ಲ ಅಂತ ತಿಳಿಯಿರಿ. ಅಂಥವನಿಗೆ ಗೋಚರಿಯಿಂದ ೧೧ ನೇ ಗುರು ೧೧ನೇ ಶನಿ, ಅಥವಾ ಗುರು ಶುಕ್ರರ ಮಹಾದೆಶೆ ಬಂದರೂ ಏನು ಪ್ರಯೋಜನ? ಇದರಂತೆ ಯಾರೊಬ್ಬರ ಜಾತಕದಲ್ಲಿ ಆಕಸ್ಮಿಕ ದ್ರವ್ಯಯೋಗವಿದೆ ಅಂತ ತಿಳಿಯಿರಿ,

ಅಥವನಿಗೆ ಸಾಡೇಸಾತಿ, ಪಂಚಮಾಷ್ಟಮ ಶನಿ, ಹಾಗೂ ಅನಿಷ್ಟ ದಶೆ ಬಂದರೂ ಕೂಡ ಈ ಯೋಗ ವ್ಯರ್ಥ ಹೋಗಲಾರದು. ಇಂತಹ ಅನೇಕ ಉದಾಹರಣೆಗಳನ್ನು ನಾವು ಕಂಡಿದ್ದೇವೆ. ಒಂದು ಊರಲ್ಲಿ ಸರ್ವಸಾಧಾರಣ ಒಬ್ಬ ವಕೀಲರಿದ್ದರು. ಅವರು ತಮ್ಮ ಜಾತಕ ನನಗೆ ತೋರಿಸಿ ನನ್ನ ಸಲಹೆ ಕೇಳಿದರು. ಆಗ ನಾನು ಅವರ ಜಾತಕ ಪರಿಶೀಲಿಸಿ ಸಾಡೇಸಾತಿ ಇದ್ದರೂ ಮ್ಯಾಜಿಸ್ಟ್ರೇಟ ಆಗುವಿರಿ. ಈ ಸಾಡೇಸಾತಿ ನಿಮಗೆ ಇತರ ವಿಷಯಗಳಲ್ಲಿ ಹಾನಿ ಉಂಟು ಮಾಡುವುದು ಅಂತಾ ಭವಿಷ್ಯ ನುಡಿದಿದ್ದೆ. ನನ್ನ ಭವಿಷ್ಯಕ್ಕನುಗುಣವಾಗಿ ಅವರು ಆ ವರ್ಷ ಮುನಸೂಫರಾದರು. ಆದರೆ ಆದೇ ವರುಷ ಅದೇ ತಿಂಗಳಲ್ಲಿ ಅವರಿಗೆ ಪತ್ನಿವಿಯೋಗವಾಯಿತು. ತಾತ್ಪರ್ಯವಿಷ್ಟೇ ಮುನಸೂಫರನ್ನಾಗಿ ಮಾಡುವ ಯೋಗವೂ, ಪತ್ನಿ ವಿಯೋಗವನ್ನು ಮಾಡುವ ಯೋಗವೂ ಒಂದೇ ತಿಂಗಳಲ್ಲಿ ಆಗಬೇಕಾದರೆ ಮೂಲ ಕುಂಡಲಿಯಲ್ಲಿಯ ಯೋಗವನ್ನು ಚನ್ನಾಗಿ ಪರಿಶೀಲಿಸಬೇಕು. ಹಾಗೂ ಇದನ್ನು ನಾವು ( Interpretation ) ಅರ್ಥ ಮಾಡಿದ ಹಾಗೆ ಇರುತ್ತದೆ. ಜ್ಯೋತಿಷ್ಯ ಶಾಸ್ತ್ರವು ನಿಶ್ಚಿತ ಅರ್ಥವನ್ನು ಕೊಡುವದಿಲ್ಲ. ಕಾಲ, ಮಾಸ, ದೇಶ, ಸಮಾಜ ಸ್ಥಾನ, ಯೋಗ್ಯತೆ, ಉದ್ಯೋಗ, ವ್ಯವಸಾಯ ಇವುಗಳ ಮೇಲೆ ಅರ್ಥ ಹಚ್ಚಬೇಕು. ಗ್ರಂಥಗಳು ನಿರ್ದಿಷ್ಟ ಫಲವನ್ನು ಹೇಳುವದಿಲ್ಲ. ಅವು ಮಾರ್ಗದರ್ಶನ ಮಾಡುತ್ತವೆ. ಉದಾ : ಯಾರೊಬ್ಬನ ಜಾತಕ ನೋಡಿ ಅವನಿಗೆ ಮಾತೃ ಸೌಖ್ಯ ಇಲ್ಲ ಅಂತ ತಿಳಿದರೆ ಇದರ ಅರ್ಥವನ್ನು ನಾವು ಅನೇಕ ಬಗೆಯಿಂದ ಮಾಡಬಹುದು. ಆ ವ್ಯಕ್ತಿಯು ತಾಯಿಯನ್ನು ಕಳಕೊಂಡಿರಬೇಕು, ಅಥವಾ ತಾಯಿಯು ಜೊತೆಗೆ ಹೊಂದಿಕೊಂಡಿರಲಾರ. ಅಥವಾ ತಾಯಿಯಿಂದ ದೂರ ಇರಬೇಕಾಗುವದು. ಹೀಗೆ ನಾವು ಅರ್ಥವನ್ನು ಹಚ್ಚಬೇಕು.

**ಮೂಲಭೂತ ಸಿದ್ಧಾಂತಗಳು :**

ಗ್ರಹಗಳ ಜಾತಿ, ದಿಕ್‌ಬಲ, ರಾಶಿಬಲ, ಸ್ಥಾನಬಲ, ಕಾಲಬಲ, ಉಚ್ಚ ನೀಚತ್ವ ಹಾಗೂ ಮೂಲ ತ್ರಿಕೋಣ, ಸಮತ್ವ, ಮಿತ್ರತ್ವ, ಶತ್ರುತ್ವ, ಕಾರಕ ಗ್ರಹ, ಗ್ರಹಗಳ ದೃಷ್ಟಿ ಮೊದಲಾದ ಪ್ರಾಥಮಿಕ ಸಿದ್ಧಾಂತಗಳನ್ನು ನಮ್ಮ ಪ್ರಥಮ ಗ್ರಂಥವಾದ ' ಪಥೂವರರ ಜ್ಯೋತಿಷ್ಯ ' ದಲ್ಲಿ ವಿವೇಚಿಸಲಾಗಿದೆ.

ಈ ಗ್ರಹಗಳ ದೃಷ್ಟಿಯು ಮೇಲಿಂದ ಜಾತಕದಲ್ಲಿ ಆಕಸ್ಮಿಕ ಧನಯೋಗ ಕಾರಕ ಗ್ರಹವು ಯಾವ ಗ್ರಹದ ಅಥವಾ ಗ್ರಹಗಳ ದೃಷ್ಟಿಯಲ್ಲಿದೆ ಎಂಬದು ಸಹಜವಾಗಿ ತಿಳಿಯುತ್ತದೆ. ಶುಭದೃಷ್ಟಿ ಹಾಗೂ ಮಿತ್ರ ಗ್ರಹದ ದೃಷ್ಟಿಯಲ್ಲಿದ್ದ ಗ್ರಹವು ಬಲಾಢ್ಯವಾಗುತ್ತದೆ. ಅಶುಭ ದೃಷ್ಟಿಯಲ್ಲಿ ಹಾಗೂ ಶತ್ರು ಗ್ರಹದ ದೃಷ್ಟಿಯಲ್ಲಿದ್ದ ಗ್ರಹವು ನಿರ್ಬಲವಾಗುತ್ತದೆ. ಇದರಂತೆ ಶುಭ ಹಾಗೂ ಮಿತ್ರಗ್ರಹಯುಕ್ತವಿದ್ದ ಗ್ರಹವು ಬಲಾಢ್ಯವಾಗುತ್ತದೆ. ಹಾಗೂ ಶತ್ರುಗ್ರಹಯುಕ್ತವಾದ ಗ್ರಹವು ನಿರ್ಬಲವಾಗುತ್ತದೆ.

ಎರಡು ಶುಭಗ್ರಹಗಳ ಮಧ್ಯದಲ್ಲಿದ್ದ ಗ್ರಹವು ಶುಭ ಫಲವನ್ನೂ ಎರಡು ಅಶುಭ ಗ್ರಹಗಳ ಮಧ್ಯದಲ್ಲಿದ್ದಗ್ರಹವು ಅಶುಭ ಫಲವನ್ನೂ ಕೊಡುತ್ತದೆ. ಉದಾ :— ಧನಾಧಿಪತಿಯಾದ ಬುಧನು ಇದ್ದು ಈ ಗ್ರಹವು ರವಿ–ಮಂಗಳ ಅಥವಾ ರವಿ–ರಾಹು ಗ್ರಹಗಳ ಮಧ್ಯದಲ್ಲಿದ್ದರೆ ಅಶುಭ ಫಲವನ್ನು ಕೊಡುತ್ತದೆ. ಇದರಂತೆ ಅದೇ ಗ್ರಹವು ಗುರು–ಶುಕ್ರರ ಮಧ್ಯದಲ್ಲಿ ಇದ್ದರೆ ಶುಭ ಫಲವನ್ನು ಕೊಡುತ್ತದೆ.

ಗ್ರಹಗಳ ಬಲಾಬಲದ ಬಗ್ಗೆ ವಿಚಾರಿಸತಕ್ಕ ಎರಡನೇ ಸಂಗತಿಯೆಂದರೆ ಗ್ರಹಗಳ ವಕ್ರಗತ ಹಾಗೂ ಉದಯಾಸ್ತವು. ಈ ವಕ್ರಗತ ಮತ್ತು ಉದಯಾಸ್ತವನ್ನು ಆಕಸ್ಮಿಕ ಧನಯೋಗದ ಬಗ್ಗೆ ಹೇಗೆ ವಿಚಾರಿಸಬೇಕೆಂಬುದನ್ನು ಮಾತ್ರ ಇಲ್ಲಿ ಕೊಡಲಾಗುವದು.

ಯಾವುದೇ ಗ್ರಹವು ಉಚ್ಚ ಅಥವಾ ಮೂಲ ತ್ರಿಕೋಣ ರಾಶಿಯಿಂದ ಮುಂದಿನ ರಾಶಿಗೆ ಹೋಗಿ ಸ್ವಲ್ಪೇ ಅಂಶದಲ್ಲಿ (ಒಂದೆರಡು ಅಂಶದಲ್ಲಿ) ಆ ರಾಶಿಯಿಂದ ವಕ್ರವಾದಾಗ ಶುಭದಾಯಕವಾಗುತ್ತದೆ. ಉದಾ :— ತುಲಾ ರಾಶಿಯಿಂದ ಶನಿಯು ವೃಶ್ಚಿಕ ರಾಶಿಗೆ ಹೋಗಿ ಎರಡು ಮೂರು ಅಂಶದಲ್ಲಿರುವಾಗ ವಕ್ರಗತಿ ಆದರೆ ಅದು ಶುಭದಾಯಕವು. ಇದರಂತೆ ಯಾವುದೇ ಗ್ರಹವು ನೀಚ ರಾಶಿಯಲ್ಲಿದ್ದು ಪುನಃ ವಕ್ರಗತಿ ಆದರೆ ಸಹ ಮಧ್ಯಮ ಫಲದಾಯಕವು. ಉದಾ :— ಗುರುವು ಮಕರ ರಾಶಿಯಲ್ಲಿ ಒಂದೆರಡು ಅಂಶದಲ್ಲಿದ್ದು ವಕ್ರ ಇದ್ದರೆ ಇದರಂತೆ ಪಾಪಗ್ರಹಗಳೂ ಸಹ ಸ್ವಕ್ಷೇತ್ರ ಮೂಲ ತ್ರಿಕೋಣ ಉಚ್ಚ ರಾಶಿಯಲ್ಲಿ ವಕ್ರವಿದ್ದಾಗ್ಯೂ ಬಲಾಢ್ಯವಾಗುತ್ತದೆ.

ಇನ್ನು ಗ್ರಹಗಳ ಅಸ್ತದ ಬಗ್ಗೆ ವಿಚಾರಿಸುವಾಗ ಮುಖ್ಯ ಎರಡು ಮೂರು ಸಂಗತಿಗಳಿವೆ. ಮೊದಲನೆಯದಾಗಿ ಯಾವುದೇ ಗ್ರಹವು ಉಚ್ಚ ಸ್ವಕ್ಷೇತ್ರ ಮೂಲ ತ್ರಿಕೋಣವಿದ್ದಾಗ ಅಸ್ತವಾದಾಗ್ಯೂ ಅಷ್ಟೊಂದು ನಿರ್ಬಲ ವಾಗಲಾರದು. ಉದಾ :— ರವಿ–ಶುಕ್ರರೀರ್ವರು ತುಲಾ ರಾಶಿಯಲ್ಲಿದ್ದು ಶುಕ್ರನು ಅಸ್ತನಿದ್ದರೆ. ಎರಡನೆಯದಾಗಿ ಬುಧನ ಉದಯಾಸ್ತವನ್ನು ನೋಡಲೇ ಬಾರದೆಂದು ಕೆಲವರ ಮತ. ನಮ್ಮ ಅನುಭವದ ಪ್ರಕಾರ ಬುಧನು ಉಚ್ಚ ಸ್ವಕ್ಷೇತ್ರ, ಅಥವಾ ವಾಯು ಹಾಗೂ ಭೂರಾಶಿಯಲ್ಲಿ ಅಸ್ತನಿದ್ದಾಗ್ಯೂ ಅಷ್ಟೊಂದು ನಿರ್ಬಲವಾಗಲಾರನು. ಮೂರನೆಯದಾಗಿ ಅಸ್ತದ ಬಗ್ಗೆ ವಿಚಾರಿಸತಕ್ಕ ಸಂಗತಿಯೆಂದರೆ ಯಾವುದೇ ಗ್ರಹವು ಅಸ್ತ ಇರುವಾಗ ರವಿಯು ಅಂಶಕ್ಕಿಂತಲೂ ಮುಂದೆ ಇದ್ದರೆ ಅಷ್ಟೊಂದು ಅಶುಭದಾಯಕವಾಗಲಾರದು. ಕೊನೆಯದಾಗಿ ಯಾವುದೆ ಗ್ರಹವು ಉದಯ ಹೊಂದುವ ಸ್ಥಿತಿಯಲ್ಲಿದ್ದರೂ ಅಷ್ಟೊಂದು ನಿರ್ಬಲವಾಗಲಾರದು.

**ಗ್ರಹಗಳ ಅವಸ್ಥೆ :**

ಬಾಲ್ಯ, ಕುಮಾರ, ತರುಣ, ವೃದ್ಧ, ಮೃತ ಹೀಗೆ ಗ್ರಹಗಳಿಗೆ ಐದು ಪ್ರಕಾರದ ಅವಸ್ಥೆಗಳಿವೆ. ಈ ಅವಸ್ಥೆಗಳಲ್ಲಿ ಮತ್ತೆ ಎರಡು ಪ್ರಕಾರಗಳಿವೆ. ಮೊದಲನೇಯದಾಗಿ ಸಮರಾಶಿಗಳಾದ ವೃಷಭ, ಕರ್ಕ, ಕನ್ಯಾ, ವೃಶ್ಚಿಕ ಮಕರ, ಮೀನ ಈ ರಾಶಿಗಳಲ್ಲಿ ಗ್ರಹವಿದ್ದಾಗ ಮೊದಲಿನ ಆರು ಅಂಶದ ವರೆಗೆ, ಬಾಲ್ಯಾವಸ್ಥೆಯಲ್ಲಿಯೂ, ಮುಂದಿದ ಹನ್ನೆರಡು ಅಂಶದ ವರೆಗೆ ಕೌಮಾರಾವಸ್ಥೆಯಲ್ಲಿಯೂ, ಮುಂದಿನ ಹದಿನೆಂಟು ಅಂಶದ ವರೆಗೆ ತಾರುಣ್ಯಾವಸ್ಥೆಯಲ್ಲಿಯೂ, ಮುಂದಿನ ಇಪ್ಪತ್ನಾಲ್ಕು ಅಂಶದ ವರೆಗೆ ವೃದ್ಧಾಪವಸ್ಥೆಯಲ್ಲಿಯೂ, ಕೊನೆಯ ೩೦ ಅಂಶದ ವರೆಗೆ ಮೃತಾವಸ್ಥೆಯಲ್ಲಿಯೂ ಇರುವವು.

ಇದರ ವಿರುದ್ಧ ವಿಷಮ ರಾಶಿಗಳಾದ ಮೇಷ, ಮಿಥುನ, ಸಿಂಹ ತುಲಾ, ಧನು, ಕುಂಭ ಈ ರಾಶಿಗಳಲ್ಲಿ ಗ್ರಹಗಳಿದ್ದಾಗ ಮೊದಲಿನ ಆರು ಅಂಶಗಳ ವರೆಗೆ ಮೃತಾವಸ್ಥೆಯಲ್ಲಿಯೂ. ಮುಂದಿನ ಹನ್ನೆರಡು ಅಂಶದ ವರೆಗೆ ವೃದ್ಧಾಪವಸ್ಥೆಯಲ್ಲಿಯೂ, ಮುಂದಿನ ಹದಿನೆಂಟು ಅಂಶದ ವರೆಗೆ

ತಾರುಣ್ಯಾವಸ್ಥೆಯಲ್ಲಿಯೂ, ಮುಂದಿನ ಇಪ್ಪತ್ತನಾಲ್ಕು ಅಂಶದ ವರೆಗೆ ಕುಮಾರಾವಸ್ಥೆಯಲ್ಲಿಯೂ, ಕೊನೆಯ ಮೂವತ್ತು ಅಂಶದ ವರೆಗೆ ಬಾಲ್ಯಾವಸ್ಥೆಯಲ್ಲಿಯೂ ಹೀಗೆ ಗ್ರಹಗಳ ಅವಸ್ಥೆಯನ್ನು ಪರಿಶೀಲಿಸಬೇಕು. ಮೃತಾವಸ್ಥೆಯಲ್ಲಿ ಗ್ರಹಗಳು ಫಲದಾಯಕವಾಗುವದಿಲ್ಲ. ಹಾಗೂ ವೃದ್ಧಾಪ್ಯಾವಸ್ಥೆಯಲ್ಲಿ ನಾಲ್ಕು ಆಣೆ ಫಲದಾಯಕವೂ, ಬಾಲ್ಯಾವಸ್ಥೆಯಲ್ಲಿ ಎಂಟು ಆಣೆ ಫಲದಾಯಕವೂ, ಕುಮಾರಾವಸ್ಥೆಯಲ್ಲಿ ಹನ್ನೆರಡು ಆಣೆ ಫಲದಾಯಕವೂ, ತಾರುಣ್ಯಾವಸ್ಥೆಯಲ್ಲಿ ಪೂರ್ಣ ಫಲದಾಯಕವೂ ಇರುತ್ತದೆ.

**ಪಾಶ್ಚಿಮಾತ್ಯ ದೈವಜ್ಞರ ಅನುಭವಿಕ ನಿಯಮಗಳು**

(೧) ಯಾವುದೇ ಎರಡು ಗ್ರಹಗಳು ಮೂವತ್ತು ಅಂಶದಲ್ಲಿ ಯೋಗ ಮಾಡುತ್ತಿದ್ದರೆ ಶುಭದಾಯಕವು.

(೨) ಯಾವುದೇ ಎರಡು ಗ್ರಹಗಳು ೪೫ ಅಂಶದ ವರೆಗೆ ಯೋಗ ಮಾಡುತ್ತಿದ್ದರೆ, ಸ್ವಾರ್ಧಕೇಂದ್ರ ಯೋಗ ಅನ್ನುತ್ತಾರೆ. ಇದು ಅಶುಭ ಯೋಗವು.

(೩) ಯಾವುದೇ ಎರಡು ಗ್ರಹವು ೬೦ ಅಂಶದ ಅಂತರವಿದ್ದಾಗ ತ್ರಿರೇಕಾದಶಯೋಗವೆನ್ನುತ್ತಾರೆ. ಇದಕ್ಕೆ ಲಾಭಯೋಗವು ಎನ್ನುತ್ತಾರೆ. ಇದು ಶುಭಯೋಗವು.

(೪) ಎರಡು ಗ್ರಹಗಳು ೯೦ ಅಂಶದಲ್ಲಿದ್ದರೆ ಕೇಂದ್ರ ಯೋಗವೆನ್ನುತ್ತಾರೆ. ಇದರ ಅಶುಭ ಫಲವೇ ಹೆಚ್ಚಾಗಿ ಸಿಗುತ್ತದೆ. ಆದರೆ ಎರಡು ಶುಭ ಗ್ರಹಗಳ ಅಂಶಾತ್ಮಕ ಯೋಗವಾದರೆ ಶುಭಫಲವೂ ಸಿಗುತ್ತದೆ.

(೫) ಎರಡು ಗ್ರಹಗಳು ೧೨೦ ಅಂಶಗಳಿದ್ದರೆ ತ್ರಿಕೋಣಯೋಗ ಅಥವಾ ನವಪಂಚಕ ಯೋಗವೆನ್ನುತ್ತಾರೆ. ಇದು ಅತ್ಯಂತ ಶುಭದಾಯಕ ಯೋಗವು.

(೬) ಎರಡು ಗ್ರಹಗಳು ೧೩೫ ಅಂಶದಲ್ಲಿದ್ದರೆ ಸಾರ್ಧ ಚತುಷ್ಕಯ ಯೋಗವು ಆಗುತ್ತದೆ. ಇದು ಅಶುಭ ಫಲದಾಯಕವು.

(೭) ಎರಡು ಗ್ರಹಗಳು ೧೫೦ ಅಂಶಗಳಲ್ಲಿದ್ದರೆ ಷಡಾಷ್ಟಕ ಯೋಗವೆನ್ನುತ್ತಾರೆ. ಈ ಯೋಗಕ್ಕೆ ಅಶುಭ ಫಲದಾಯಕ ಯೋಗವೆನ್ನುತ್ತಾರೆ.

ಆದರೆ ನಮ್ಮ ಅನುಭವದ ಪ್ರಕಾರ ಆಕಸ್ಮಿಕ ಧನಲಾಭಕಾರಕ ಗ್ರಹದೊಂದಿಗೆ ಈ ಯೋಗವಾದರೆ ಶುಭದಾಯಕವು ಆಗುತ್ತದೆ.

(೮) ಎರಡು ಗ್ರಹಗಳು ೧೮೦ ಅಂಶದ ಅಂತರದಲ್ಲಿದ್ದರೆ ಪ್ರತಿಯೋಗ ಅಥವಾ ಸಮಸಪ್ತಕ ಯೋಗವೆನ್ನುತ್ತಾರೆ. ಯುತಿಯೋಗದಂತೆ ಈ ಯೋಗವು ಸಹ ಶುಭದಾಯಕವಿರುತ್ತದೆ. ಇದರಂತೆ ಆಕಸ್ಮಿಕ ಧನಕಾರಕ ಗ್ರಹದೊಂದಿಗೆ ಈ ಯೋಗವಾದರೆ ಹೆಚ್ಚು ಶುಭದಾಯಕವಾಗುತ್ತದೆ.

(೯) ಯಾವುದೇ ಎರಡು ಗ್ರಹಗಳು ಅಥವಾ ಅನೇಕ ಗ್ರಹಗಳು ಒಂದೇ ರಾಶಿಯಲ್ಲಿ ಒಂದೇ ಅಂಶದಲ್ಲಿದ್ದರೆ ಯುತಿಯೋಗವೆನ್ನುತ್ತಾರೆ. ಈ ಯೋಗವು ಗ್ರಹಗಳ ಶುಭಾಶುಭಗಳ ಮೇಲೆ ಅವಲಂಬಿಸಿರುತ್ತದೆ. ಕೆಲವೊಮ್ಮೆ ಶುಭಫಲವು ಕೆಲವೊಮ್ಮೆ ಅಶುಭ ಫಲವು ಇರುತ್ತದೆ.

(೧೦) ಯಾವುದೇ ಎರಡು ಗ್ರಹಗಳ ಕ್ರಾಂತಿಯು ಸಮ ಇರುತ್ತದೆಯೋ ಇದಕ್ಕೆ ಸಮಕ್ರಾಂತಿ ಯೋಗವೆನ್ನುತ್ತಾರೆ. ಇದು ಸಹ ಶುಭ ಯೋಗವೇ ಇರುತ್ತದೆ.

ಇದರ ಹೊರತಾಗಿ ೩೬-೭೨-೧೦೮-೧೪೪ ಅಂಶಗಳ ದೃಷ್ಟಿಯೋಗಗಳನ್ನು ಎಣಿಸುತ್ತಾರೆ.

**ಇವು ಶುಭಯೋಗಗಳು :**

ಯಾವುದೇ ಶೀಘ್ರಗತಿಯ ಗ್ರಹದೊಂದಿಗೆ ಮಂದಗತಿಯ ಗ್ರಹವು ದೃಷ್ಟಿಯೋಗ ಮಾಡುತ್ತಿದ್ದಾಗ ಮೂರು ತರಹದ ದೃಷ್ಟಿಯೋಗಗಳೆಂದು ಎಣಿಸಬೇಕು. (೧) ದೃಷ್ಟಿಯೋಗ ಆಗುತ್ತಿದ್ದಾಗ (೨) ದೃಷ್ಟಿಯೋಗ ಆಗುತ್ತಿರುವ (೩) ದೃಷ್ಟಿಯೋಗ ಆದಂಥ ಇವುಗಳಿಂದ ಶುಭಾಶುಭಫಲವು ದೊರೆಯುತ್ತದೆ ಮತ್ತು ಗೋಚರಿಯಿಂದ ಗ್ರಹಗಳು ಈ ಗ್ರಹಗಳ ಮೇಲಿಂದ ಭ್ರಮಣ ಮಾಡುತ್ತಿರುವಾಗ ಶುಭಾಶುಭ ಫಲಗಳು ಕೊಡುತ್ತವೆ.

ಈ ಎಲ್ಲ ದೃಷ್ಟಿಯೋಗಗಳು ಅಂಶಾತ್ಮಕವಿದ್ದರೆ ಮಾತ್ರ ಪೂರ್ಣ ಫಲನ್ನು ಕೊಡುವವು. ಇವುಗಳಲ್ಲಿ ಕೆಲವೊಂದು ಅಂಶದ ವರೆಗೆ ಅವುಗಳ ಫಲ ಸಿಗುತ್ತವೆ. ಇದಕ್ಕೆ ದೀಪ್ತಾಂಶವೆನ್ನುತ್ತಾರೆ. ಈ ದೀಪ್ತಾಂಶವನ್ನು

ಭಿನ್ನ ಭಿನ್ನ ಯೋಗಗಳಿಗೆ ಭಿನ್ನ ಭಿನ್ನ ಅಂಶವನ್ನು ನೋಡಬೇಕು. ಇವುಗಳನ್ನು ಕೆಳಗೆ ಕೊಡಲಾಗಿದೆ.

೧) ಪೂರ್ಣ ದೃಷ್ಟಿಯೋಗ. ಪ್ರತಿಯೋಗ, ಯುತಿಯೋಗ ಇವುಗಳಿಗೆ ಏಳು ದೀಪ್ತಾಂಶವನ್ನು ಹಿಡಿಯಬೇಕು.

೨) ಕೇಂದ್ರ ತ್ರಿಕೋಣ ಯೋಗಕ್ಕೆ ಆರು ಅಂಶವನ್ನು ಹಿಡಿಯಬೇಕು.

೩) ತ್ರಿರೇಕಾದಶ ಯೋಗಕ್ಕೆ ಐದು ಅಂಶವನ್ನು ಹಿಡಿಯಬೇಕು.

೪) ಷಡಾಷ್ಟಕ ಯೋಗಕ್ಕೆ ನಾಲ್ಕು ಅಂಶವನ್ನು ಹಿಡಿಯಬೇಕು.

೫) ಸಾರ್ಧ ಕೇಂದ್ರ ಹಾಗೂ ಇತರ ಯೋಗಗಳಿಗೆ ಮೂರು ಅಂಶ ಹಿಡಿಯಬೇಕು.

೬) ೩೦–೩೬–೪೪–೭೨ ಈ ಅಂಶಗಳ ಯೋಗಗಳಿಗೆ ಎರಡು ಅಂಶಗಳನ್ನು ಹಿಡಿಯಬೇಕು.

೭) ಸಮಕ್ರಾಂತಿ ಯೋಗಕ್ಕೆ ಒಂದು ಅಂಶವನ್ನು ಹಿಡಿಯಬೇಕು. ಹೀಗೆ ಗ್ರಹಗಳ ದೃಷ್ಟಿಯೋಗವನ್ನು ಈ ರೀತಿಯಿಂದ ನೋಡಬೇಕು.



# ಲಗ್ನಗಳ ಮೇಲಿಂದ ಧನಯೋಗವನ್ನು ಹೇಗೆ ನೋಡಬೇಕು.

**ಮೇಷ ಲಗ್ನ :**

ಈ ಲಗ್ನಕ್ಕೆ ಗುರು, ರವಿ, ಚಂದ್ರ ಹಾಗೂ ಶನಿ ಈ ನಾಲ್ಕು ಗ್ರಹಗಳ ರಾಜಯೋಗಕಾರಕ ಗ್ರಹಗಳಿರುತ್ತವೆ. ಈ ಗ್ರಹಗಳ ರಾಶಿಬಲ, ಸ್ಥಾನಬಲ ಹಾಗೂ ಗ್ರಹಗಳ ಶುಭಾಶುಭ ಸಂಬಂಧಯೋಗ ಇವುಗಳ ಮೇಲಿಂದ ಜಾತಕದ ಯೋಗ್ಯತೆಯು ಅವಲಂಬಿಸಿರುತ್ತದೆ. ಈ ಗ್ರಹಗಳು ಜಾತಕದಲ್ಲಿರುವ ಸ್ಥಿತಿಗತಿಯಿಂದಲೇ ಧನಯೋಗ್ಯತೆಯು ಅವಲಂಬಿಸಿರುತ್ತದೆ. ಈ ಲಗ್ನಕ್ಕೆ ಆಕಸ್ಮಿಕ ಧನಲಾಭಕಾರಕ ಗ್ರಹಗಳ ಸಂಬಂಧ ಏನು ಎಂಬುದನ್ನು ನೋಡೋಣ.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹಗಳಾದ ಮಂಗಳ, ರವಿ ಇದ್ದು ಲಾಭಕಾರಕ ಗ್ರಹಗಳಾದ ಶನಿ ಹಾಗೂ ಶುಕ್ರರಿರುತ್ತಾರೆ. ಈ ನಾಲ್ಕು ಗ್ರಹಗಳಲ್ಲಿ ಮಂಗಳ ಹಾಗೂ ರವಿ ಮಿತ್ರರೂ ಮತ್ತು ಶನಿ, ಶುಕ್ರರು, ಮಿತ್ರರೂ ಇದ್ದಾರೆ. ಮಂಗಳ ಹಾಗೂ ರವಿಗ್ರಹಗಳ ಶತ್ರುಗಳು ಶನಿ, ಶುಕ್ರರು ಇದ್ದಾರೆ. ಆದ್ದರಿಂದ ಈ ನಾಲ್ಕು ಗ್ರಹಗಳ ತಾತ್ಕಾಲಿಕ ಮೈತ್ರಿತ್ವಯೋಗ ವಿದ್ದ ಕುಂಡಲಿಗೆ ನಿಃಸಂಶಯವಾಗಿ ಆಕಸ್ಮಿಕ ದ್ರವ್ಯಲಾಭವಾಗುತ್ತದೆ. ಹಾಗೂ ಈ ಲಗ್ನದಲ್ಲಿ ಮಂಗಳ, ಶುಕ್ರರ ಅನ್ಯೋನ್ಯ ಸಂಬಂಧ ಯೋಗವಾಗಿದ್ದರೆ ಸ್ತ್ರೀಧನ, ಮೃತ್ಯುಪತ್ರದಿಂದ ಬರುವ ಧನ, ಬಕ್ಷೀಸ ರೂಪದಿಂದ ಬರುವ ಧನ ಮೊದಲಾದವುಗಳು ಬರುತ್ತವೆ. ಮೇಲೆ ಬರೆದ ನಾಲ್ಕು ಗ್ರಹಗಳ ಅನ್ಯೋನ್ಯ ಸಂಬಂಧ ಯೋಗವಾದರೂ ಆಕಸ್ಮಿಕ ಧನಪ್ರಾಪ್ತಿಯಾಗುತ್ತದೆ. ಇದಲ್ಲದೆ

ಶುಕ್ರ-ಮಂಗಳರ ಅನ್ಯೋನ್ಯ ಯೋಗವಿದ್ದು, ಚಂದ್ರ-ಗುರು ಬಲಾಢ್ಯರಾಗಿದ್ದರೆ ಲಾಟರಿಯಿಂದ ಧನಪ್ರಾಪ್ತಿಯಾಗುತ್ತದೆ.

**ಸಾಮಾನ್ಯ ನಿಯಮ**

ಈ ಲಗ್ನಕ್ಕೆ ಕೆಳಗೆ ಬರೆದ ಸಾಮಾನ್ಯ ನಿಯಮಗಳನ್ನು ಕೊಡಲಾಗಿದೆ.

(೧) ರವಿ-ಶನಿ ಯುತಿ,ಪ್ರತಿಯುತಿ,ಅನ್ಯೋನ್ಯ ಸಂಬಂಧವಿದ್ದರೆ ಮಾತ್ರ ಲಾಭದರ್ಶಕವಿರುತ್ತದೆ. ಇತರ ಕಡೆಯಲ್ಲಿ ಹಾನಿಕಾರಕವೂ ಆಗುತ್ತದೆ ಹಾಗೂ ಶನಿ-ರವಿಯರ ಕುಯೋಗವಿದ್ದರೆ ಸಟ್ಟಾ ಲಾಟರಿ ಮೊದಲಾದ ಗೋಜಗಳಿಗೆ ಹೋಗಬಾರದು.

(೨) ಮಂಗಳ-ಶುಕ್ರ, ಶನಿ-ಮಂಗಳ, ರವಿ-ಶುಕ್ರ ಈ ಗ್ರಹಗಳ ಕುಯೋಗವೂ ಇದ್ದರೆ ಹಾನಿಕಾರವು. ಆದರೆ ಅನ್ಯೋನ್ಯ ಸಂಬಂಧಯೋಗವು ಲಾಭದಾಯಕವು.

(೩) ಮೇಷ ಈ ಲಗ್ನಕ್ಕೆ ಗುರು-ಚಂದ್ರರೂ ಯೋಗಕಾರಕವಿದೆ. ಮೂಲಕ ಗುರುವಿನ ಅನುಕೂಲವಿಲ್ಲದೆ ಯಶ ಸಿಗಲಾರದು. ಭಾಗ್ಯೇಶನಾದ ಗುರುವಿನ ಶುಭಸಂಬಂಧ ರವಿ ಇಲ್ಲವೆ ಚಂದ್ರರೊಡನೆ ಚತುರ್ಥ ಪಂಚಮ ಭಾಗ್ಯದಲ್ಲಿ ಆದುದ್ದಾದರೆ ನಿಃಸಂಶಯವಾಗಿ ದ್ರವ್ಯಲಾಭವಾಗುತ್ತದೆ.

(೪) ಶನಿಯು ರವಿಯ ಮಾರಕನು. ಮಂಗಳ ಶನಿಯ ಮಾರಕನು. ಇದ್ದುದರಿಂದ ಶನಿಯ ಮುಂದೆ ರವಿಯೂ ಹಾಗೂ ಶನಿಯ ಮುಂದೆ ಮಂಗಳ ಇರಬೇಕು. ಅಥವಾ ಶನಿಯ ದ್ವಿತೀಯದಲ್ಲಿ ಮಂಗಳ ಅಥವಾ ರವಿ ಇದ್ದರೆ ಲಾಭದಾಯಕ ಯೋಗವು ಆಗುತ್ತದೆ. ಆದರೆ ಶನಿಯ ದಶಮದಲ್ಲಿ ಮಂಗಳ ಇದ್ದರೆ ಹಾನಿದಾಯಕವು.

(೫) ಶನಿ-ಶುಕ್ರರ ಸಂಬಂಧ — ಲಾಭ, ದಶಮ, ದ್ವಿತೀಯ, ಸಪ್ತಮದಲ್ಲಿ ಆದರೂ ಆಕಸ್ಮಿಕವಾಗಿ ಧನಲಾಭ ಪ್ರಾಪ್ತಿಯಾಗುತ್ತದೆ. ಈ ಲಾಭವು ಯಾವ ವೇಳೆಯಲ್ಲಾಗುತ್ತದೆಂಬುದನ್ನು ಅರಿಯಲು ವಯಸ್ಸಿನ ೧೭-೨೦-೨೮-೩೨-೪೧-೪೪ ಈ ವರ್ಷಗಳಲ್ಲಿ ಅಥವಾ ಗುರು, ರವಿ, ಮಂಗಳ ಚಂದ್ರರ ದಶಾಂತರ್ದಶೆಯಲ್ಲಿ ಲಾಭವಾಗುತ್ತದೆ.

**ವೃಷಭ ಲಗ್ನ :**

ಈ ಲಗ್ನಕ್ಕೆ ಶನಿ, ಶುಕ್ರ, ರವಿ, ಬುಧ ಈ ನಾಲ್ಕು ಗ್ರಹಗಳು ರಾಜ ಯೋಗಕಾರಕ ಗ್ರಹಗಳು. ಈ ಗ್ರಹಗಳ ರಾಶಿಬಲ, ಸ್ಥಾನಬಲ, ಹಾಗೂ ಗ್ರಹಗಳ ಶುಭಾಶುಭ ಸಂಬಂಧಯೋಗ, ಇವುಗಳ ಮೇಲಿಂದ ಜಾತಕದ ಯೋಗ್ಯತೆಯು ಅವಲಂಬಿಸಿರುತ್ತದೆ.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹಗಳೆಂದರೆ ಬುಧ ಹಾಗೂ ಗುರು ಇರುತ್ತಾರೆ. ಏಕೆಂದರೆ, ಪಂಚಮ ಹಾಗೂ ಧನಸ್ಥಾನದ ಅಧಿಪತಿಯಾದ ಬುದನೂ, ಅಷ್ಟಮ ಹಾಗೂ ಲಾಭಸ್ಥಾನದ ಅಧಿಪತಿಯಾದ ಗುರುವೂ, ಇರುವ ಮೂಲಕ ಈ ಗ್ರಹಗಳಲ್ಲಿ ಶುಭಸಂಬಂಧ ಯುತಿ, ಪ್ರತಿಯುತಿಗಳು ಪಂಚಮದಲ್ಲಿ ಅಥವಾ ಲಾಭದಲ್ಲಿಯಾದರೆ ನಿಃಸಂಶಯವಾಗಿ ಆಕಸ್ಮಿಕ ಧನ ಲಾಭವಾಗುತ್ತದೆ. ಅಥವಾ ಈ ಗ್ರಹಗಳು ದಶಮ, ಲಾಭ ಚತುರ್ಥ, ಪಂಚಮ, ಸಪ್ತಮ, ಅಷ್ಟಮ, ಲಗ್ನ, ಧನ, ಈ ಸ್ಥಾನಗಳಲ್ಲಿದ್ದರೂ ಕೂಡ ಆಕಸ್ಮಿಕ ಧನಲಾಭವಾಗುತ್ತದೆ ಅಥವಾ ಅನ್ಯೋನ್ಯ ರಾಶಿಸಂಬಂಧ, ಅನ್ಯೋನ್ಯ ಸ್ಥಾನಸಂಬಂಧವಾದರೂ ಲಾಭವಾಗುತ್ತದೆ. ಅಥವಾ ಈ ಗ್ರಹ ಗಳು ತ್ರಿಕೋಣ ಷಡಾಷ್ಟಕ ಯೋಗವಾದರೂ ಆಕಸ್ಮಿಕ ಲಾಭವಾಗುತ್ತದೆ. ಈ ಗ್ರಹಗಳ ಅಂಶಾತ್ಮಕ ಕೇಂದ್ರ ಯೋಗವಾದರೆ ಸಟ್ಟಾ ಲಾಟರಿಗಳಿಂದ ಲಾಭ ವಾಗುತ್ತದೆ.

ಲಾಭ ಎಷ್ಟಾಗುತ್ತದೆ ಎಂಬುದನ್ನು ಆರಿಯಲು ಕುಂಡಲಿಯ ಯೋಗ್ಯ ತೆಯ ಮೇಲೆ ಅವಲಂಬಿಸಿರುತ್ತದೆ. ಹಾಗೂ ಬುಧ ಗುರುಗಳ ಬಲಾಬಲಗಳ ಮೇಲೆಯೂ ಅವಲಂಬಿಸಿರುತ್ತದೆ. ಲಾಭ ಯಾವ ವಯಸ್ಸಿನಲ್ಲಿ ಆಗುತ್ತದೆ ಅಂದರೆ ವಯಸ್ಸಿನ ೧೬, ೨೫, ೩೨, ೩೭, ೪೮, ೪೯ ಈ ವರ್ಷಗಳಲ್ಲಿ ಅಥವಾ ಬುಧ-ಶುಕ್ರರ ಮಹಾದಶೆಯಲ್ಲಿ ಸಟ್ಟಾ, ಲಾಟರಿ, ರೇಸ ವೊದಲಾದವುಗಳಿಂದ ಧನಲಾಭವಾಗುತ್ತದೆ. ಜಾತಕದಲ್ಲಿ ಬುಧ-ಗುರು ಗ್ರಹಗಳು ಅಶುಭ ಗ್ರಹ ಗಳ ರಾಶಿಯಲ್ಲಿ ಅಥವಾ ಶತ್ರುಕ್ಷೇತ್ರದಲ್ಲಿದ್ದರೆ ಅಥವಾ ಶತ್ರು ದೃಷ್ಟಿ ಇದ್ದರೆ ಲಾಭವಾಗದೆ ಹಾನಿಯಾಗುತ್ತದೆ. ಆದುದರಿಂದ ವೃಷಭ ಲಗ್ನದ ವ್ಯಕ್ತಿಗಳು

ಬುಧ, ಗುರು, ಗ್ರಹಗಳ ಬಲಾಬಲವನ್ನು ನೋಡಿ ರೇಸ ಮೊದಲಾದವುಗಳಲ್ಲಿ ಭಾಗವಹಿಸಬೇಕು.

**ಸಾಮಾನ್ಯ ನಿಯಮಗಳು :**

(೧) ವೃಷಭ ಲಗ್ನ ಈ ಲಗ್ನದ ಅಧಿಪತಿ ಶುಕ್ರನಿದ್ದು ಗುರುವಿನ ಶತ್ರುವಿರುತ್ತಾನೆ. ಆದರೆ ಗುರು ಲಾಭೇಶನಿದ್ದ ಕಾರಣ ಗುರು-ಶುಕ್ರರ ಯುತಿ ಲಾಭದರ್ಶಕವಾಗುತ್ತದೆ. ಶುಕ್ರ-ಶನಿ ಬುಧ-ಗುರು ಇವರ ಶುಭ ಸಂಬಂಧಯೋಗ ಯಾವುದೇ ಸ್ಥಾನದಲ್ಲಿಯಾದರೂ ನಿಃಸಂಶಯವಾಗಿ ಆಕಸ್ಮಿಕ ಧನಲಾಭವನ್ನು ತೋರಿಸುತ್ತದೆ.

(೨) ರವಿ ಶನಿ ಶತ್ರುಗ್ರಹ ಇರುವರೇನೋ ನಿಜ. ಆದರೆ ಈ ಗ್ರಹಗಳು ಯೋಗಕಾರಕವಿರುವದರಿಂದ ರವಿ, ಶನಿ, ಗುರು, ಬುಧ ಇವರ ಸಂಬಂಧ ಸ್ಥಾವರ ಇಸ್ಟೇಟಿನಿಂದ ಲಾಭ ಸೂಚಿಸುತ್ತದೆ.

(೩) ಗುರು-ಬುಧ ಇವರ ಶುಭಸಂಬಂಧ ಯೋಗವು ಸ್ತ್ರೀಯರಿಂದ ಇಸ್ಟೇಟ ಲಾಭವು ದರ್ಶಿಸುತ್ತದೆ.

(೪) ಶನಿ, ಬುಧ, ಗುರು, ಚಂದ್ರ ಇವರ ಶುಭಯೋಗವಿದ್ದರೆ ಪರಾಕ್ರಮದಿಂದ ಧನಪ್ರಾಪ್ತಿಯಾಗುತ್ತದೆ.

(೫) ಬುಧ-ಗುರು ಇವರ ಜೊತೆಗೆ ರಾಹು ಅಥವಾ ಕೇತು ಗ್ರಹಗಳ ಷಡಾಷ್ಟಕ ಕೇಂದ್ರಯೋಗವಿದ್ದು, ಗೋಚರಿ ಗ್ರಹಗಳ ಭ್ರಮಣವಾಗುವ ಕಾಲಕ್ಕೆ ಹಾನಿದಾಯಕವಾಗುತ್ತದೆ.

ಮಿಥುನ ಲಗ್ನ :

ಈ ಲಗ್ನಕ್ಕೆ ಬುಧ, ಗುರು, ಶುಕ್ರ ಹಾಗೂ ಶನಿ ಈ ಗ್ರಹಗಳು ರಾಜಯೋಗಕಾರಕ ಗ್ರಹಗಳಿರುತ್ತವೆ. ಈ ಗ್ರಹಗಳ ರಾಶಿಬಲ, ಸ್ಥಾನಬಲ ದಿಕ್‌ಬಲ, ಕಾಲಬಲ, ಶುಭಾಶುಭ ಸಂಬಂಧಯೋಗ ಇವುಗಳ ಮೇಲೆ ಜಾತಕದ ಯೋಗ್ಯತೆಯು ಅವಲಂಬಿಸಿರುತ್ತದೆ. ಈ ಲಗ್ನಕ್ಕೆ ಚಂದ್ರನು ಧನೇಶನಿದ್ದುದರಿಂದ ಚಂದ್ರ ಗುರುವಿನ ಯುತಿಯು ಕೇಂದ್ರ ಇಲ್ಲವೆ ತ್ರಿಕೋಣದಲ್ಲಿ ಅಥವಾ

ಧನ ಹಾಗೂ ಲಾಭಸ್ಥಾನದಲ್ಲಿ ಇದ್ದರೆ ಉತ್ತಮ ಧನಯೋಗವಾಗುತ್ತದೆ. ಇದರಂತೆ ಶುಕ್ರ–ಬುಧ ಶುಕ್ರ–ಶನಿ ಇವರ ಯೋಗವೂ ಸಹ ಉತ್ತಮ ಧನ ಯೋಗವಾಗುತ್ತದೆ. ಆದುದರಿಂದ ಈ ಲಗ್ನಕ್ಕೆ ಪ್ರಥಮವಾಗಿ ಈ ನಾಲ್ಕು ಗ್ರಹಗಳ ಬಲಾಬಲವನ್ನು ವಿಚಾರಿಸಿ ಆಕಸ್ಮಿಕ ಧನಲಾಭದ ಬಗ್ಗೆ ವಿಚಾರಿಸ ಬೇಕು.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹವೆಂದರೆ ಶನಿ, ಶುಕ್ರ, ಚಂದ್ರ, ಮಂಗಳ ಈ ನಾಲ್ಕು ಗ್ರಹಗಳು ಆಗುತ್ತವೆ. ಶನಿ ಹಾಗೂ ಶುಕ್ರರು ಪಂಚ ಮೇಶ ಹಾಗೂ ಅಷ್ಟಮೇಶ ರುವದರಿಂದ ಮತ್ತು ಚಂದ್ರ ಹಾಗೂ ಮಂಗಳರು ಧನೇಶ ಹಾಗೂ ಲಾಭೇಶ ಇರುವದರಿಂದ ಈ ನಾಲ್ಕು ಗ್ರಹಗಳು ಆಕಸ್ಮಿಕ ಧನಯೋಗಕಾರಕ ಗ್ರಹಗಳು ಇರುತ್ತವೆ. ಈ ಗ್ರಹಗಳಲ್ಲಿ ಶನಿ–ಶುಕ್ರರು ಮಂಗಳನ ಶತ್ರು ಇರುವದರಿಂದ ಈ ಗ್ರಹಗಳ ಶುಭಯೋಗವು ಅವಶ್ಯವಿರು ತ್ತದೆ ಅಥವಾ ಈ ಗ್ರಹಗಳ ತಾತ್ಕಾಲಿಕ ಮೈತ್ರಿತ್ವ ಇರಬೇಕು. ಅಥವಾ ಈ ಗ್ರಹಗಳ ಮಾಲಾ ಯೋಗವಿರಬೇಕು. ಈ ಮಾಲಾಯೋಗವಿದ್ದರೆ ಮಾತ್ರ ಎಲ್ಲಕ್ಕಿಂತ ಉತ್ತಮ ಲಾಭಯೋಗವಾಗುತ್ತದೆ. ಈ ಯೋಗವು ಅಷ್ಟಮ ಸ್ಥಾನದಿಂದ ದಶಮದವರೆಗೆ ಅಥವಾ ಧನಸ್ಥಾನದಿಂದ ಪಂಚಮದ ವರೆಗೆ ಇದ್ದರೆ ಉತ್ತಮ ಲಾಭಯೋಗಕಾರಕವಾಗುತ್ತದೆ.

ಶನಿ–ಮಂಗಳರ ಶುಭಯೋಗದಿಂದ ಸ್ತ್ರೀಧನ, ಗುಪ್ತಧನ, ವಾರ್ಸಾಧನ ಪ್ರಾಪ್ತಿಯಾಗುತ್ತದೆ. ಆದರೆ ಶುಕ್ರ–ಮಂಗಳ ಶುಭಯೋಗವು ರೇಸ ಲಾಟರಿ ಗಳಿಂದ ನಿಃಸೂಶಯವಾಗಿ ಲಾಭವಾಗುತ್ತದೆ. ಇದರಂತೆ ಈ ಗ್ರಹಗಳ ಅನ್ಯೋನ್ಯ ಸಂಬಂಧವು ಕೂಡ ಲಾಭವಾಗುತ್ತದೆ. ಈ ಲಾಭದ ಪ್ರಮಾಣವು ಕುಂಡಲಿ ದರ್ಜೆ ಮೇಲೆ ಅವಲಂಬಿಸಿರುತ್ತದೆ.

ಪಂಚಮೇಶನ ಪ್ರಮಾಣವು ಧನಸ್ಥಾನದ ಮೇಲಿಂದ ಧನೇಶನ ಪ್ರಮಾ ಣವು ಪಂಚಮಸ್ಥಾನದ ಮೇಲಿಂದ ಆಗುವಾಗ ಸಟ್ಟಾ, ಲಾಟರಿ, ರೇಸ ಪ್ರಾಯಿಜಬೋಂಡ ಇತ್ಯಾದಿಗಳ ಮೇಲಿಂದ ಧನಪ್ರಾಪ್ತಿಯಾಗುತ್ತದೆ. ಇದ ರಂತೆ ಅಷ್ಟಮೇಶನ ಪ್ರಮಾಣವು ಅಷ್ಟಮ ಸ್ಥಾನದ ಮೇಲಿಂದ ಇಲ್ಲವೆ ಧನ ಸ್ಥಾನದ ಮೇಲಿಂದ ಇಲ್ಲವೆ ಲಾಭಸ್ಥಾನದ ಮೇಲೆ ಆಗುವಾಗ ಸ್ತ್ರೀಧನ, ವಾರ್ಸಾ ಹಕ್ಕು ಮೊದಲಾದವುಗಳಿಂದ ಧನಪ್ರಾಪ್ತಿಯಾಗುತ್ತದೆ.

**ಸಾಮಾನ್ಯ ನಿಯಮ :**

( ೧ ) ಈ ಲಗ್ನಕ್ಕೆ ಶನಿ-ಮಂಗಳ ಯುತಿ ಅನ್ಯೋನ್ಯ ಸಂಬಂಧ ಇದ್ದರೆ ಲಾಭದರ್ಶಕವಾಗುತ್ತದೆ. ಇತರ ಕಡೆಯಲ್ಲಿ ಆದರೆ ಹಾನಿಕಾರಕವಾಗುತ್ತದೆ. ಇದರಂತೆ ಮಂಗಳ-ಶನಿಯರ ಕುಯೋಗವಿದ್ದರೆ ಹಾನಿಕಾರಕವಾಗುತ್ತದೆ, ಅಥವಾ ಶನಿ ದಶಮದಲ್ಲಿ ಮಂಗಳನಿದ್ದರೂ ಕೂಡ ಹಾನಿದಾಯಕವಾಗುತ್ತದೆ. ( ಇದೊಂದು ಋಣಯೋಗ ).

( ೨ ) ಮಂಗಳ-ಶುಕ್ರರ ಯೋಗವು ಉತ್ತಮ ಲಾಭದಾಯಕವು.

( ೩ ) ಚಂದ್ರ ಮಂಗಳರ ಯುತಿಯು ಲಕ್ಷ್ಮೀಕಾರಕವಿದ್ದು, ಇದು ಶುಕ್ರ ಅಥವಾ ಶನಿಗಳೊಂದಿಗೆ ಶುಭಸಂಬಂಧವಿದ್ದರೆ ನಿಃಸಂಶಯವಾಗಿ ಧನ ಪ್ರಾಪ್ತಿಯಾಗುತ್ತದೆ.

( ೪ ) ಗುರು ಹಾಗೂ ಬುಧ ಇವರು ಕೇಂದ್ರಗಳ ಅಧಿಪತಿ ಇರುವದರಿಂದ ಇವರ ಸಂಬಂಧವು ಆಕಸ್ಮಿಕ ಧನಾಕಾರಕ ಗ್ರಹಗಳ ಜೊತೆಗೆ ಇದ್ದರೆ ಉತ್ತಮ ಲಾಭವಾಗುತ್ತದೆ.

**ಕರ್ಕ ಲಗ್ನ**

ಈ ಲಗ್ನಕ್ಕೆ ಮಂಗಳ-ಗುರು-ಚಂದ್ರ ಇವರು ಮುಖ್ಯ ರಾಜಯೋಗ ಕಾರಕ ಗ್ರಹಗಳು. ಚಂದ್ರ-ಶುಕ್ರರ ಬಲಾಬಲವನ್ನು ನೋಡಬೇಕು. ಈ ನಾಲ್ಕು ಗ್ರಹಗಳ ರಾಶಿಬಲ, ಸ್ಥಾನಬಲ ದಿಕ್‌ಬಲ. ಕಾಲಬಲ ಶುಭಾಶುಭ ಸಂಬಂಧಯೋಗ ಇವುಗಳ ಮೇಲೆ ಜಾತಕದ ಯೋಗ್ಯತೆ ಅವಲಂಬಿಸಿರುತ್ತದೆ. ಗುರು-ಮಂಗಳ, ಗುರು-ಚಂದ್ರ, ಮಂಗಳ-ಚಂದ್ರ ಇವರ ಯುತಿ ನವಮ ಇಲ್ಲವೇ ದಶಮದಲ್ಲಿದ್ದರೆ ಈ ಕುಂಡಲಿಯು ಉತ್ತಮ ದರ್ಜೆಯದು ಇರುತ್ತದೆ. ಈ ಗ್ರಹಗಳೊಂದಿಗೆ ರವಿಯು ಶುಭಸಂಬಂಧವಿದ್ದರೆ ವ್ಯಕ್ತಿಯು ಸಿರಿವಂತನಿದ್ದು ಅವನಿಗೆ ಸರಕಾರದಿಂದ ಬಹುಮಾನ ರೂಪವಾಗಿ ದ್ರವ್ಯಲಾಭವಾಗುತ್ತದೆ.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹವೆಂದರೆ ಶನಿ, ಮಂಗಳ, ಶುಕ್ರ, ರವಿ ಈ ನಾಲ್ಕು ಗ್ರಹಗಳಿರುತ್ತವೆ. ಅಂದರೆ ಮೇಷ ಲಗ್ನದ ಆಕಸ್ಮಿಕ ಧನ

ಕಾರಕ ಗ್ರಹಗಳೇ ಈ ಲಗ್ನಕ್ಕೂ ಇರುತ್ತವೆ. ಮಂಗಳ, ಶುಕ್ರ, ರವಿ ಈ ಗ್ರಹಗಳ ಶುಭಯೋಗದಿಂದ ಸಟ್ಟಾ, ರೇಸ ಲಾಟರಿ ಮೊದಲಾದವುಗಳಿಂದ ಧನಪ್ರಾಪ್ತಿಯಾಗುತ್ತದೆ. ಶನಿ, ಶುಕ್ರ, ರವಿ ಈ ಗ್ರಹಗಳ ಶುಭಯೋಗದಿಂದ ಸ್ತ್ರೀ ಧನ, ವಾರ್ಸಾ ಹಕ್ಕಿನ ಧನ ಮೊದಲಾದವುಗಳಿಂದ ಧನಪ್ರಾಪ್ತಿಯಾಗುತ್ತದೆ. ಲಗ್ನಾಧೀಶನಾದ ಚಂದ್ರನ ಸಂಬಂಧ ಭಾಗ್ಯ ಇಲ್ಲವೇ ಪಂಚಮೇಶನ ಜೊತೆಗೆ ಇದ್ದರೆ ಸರಕಾರದಿಂದ ಧನಲಾಭವಾಗುತ್ತದೆ.

ಸಿಂಹ ಲಗ್ನ :

ಈ ಲಗ್ನಕ್ಕೆ ರವಿ, ಮಂಗಳ, ಗುರು, ಶುಕ್ರ ಈ ಎಲ್ಲ ನಾಲ್ಕು ಗ್ರಹಗಳು ರಾಜಯೋಗಕಾರಕವಿದ್ದು. ಈ ಗ್ರಹಗಳ ರಾಶಿಬಲ, ಸ್ಥಾನಬಲ, ಕಾಲಬಲ, ದಿಕ್‌ಬಲ ಶುಭಸಂಬಂಧ, ಶುಭಾಶುಭ ಸಂಬಂಧಯೋಗ ಇವುಗಳ ಮೇಲೆ ಕುಂಡಲಿಯ ಯೋಗ್ಯತೆ ಅವಲಂಬಿಸಿರುತ್ತದೆ.

ಈ ಲಗ್ನದ ಕೇಂದ್ರ ತ್ರಿಕೋಣದಲ್ಲಿ ಶುಕ್ರ-ಮಂಗಳ ಅಥವಾ ಶುಕ್ರ ಹಾಗೂ ಮಂಗಳರ ಶುಭಸಂಬಂಧವು ಎಲ್ಲಿ ಇದ್ದರೂ ನಿಃಸಂಶಯವಾಗಿ ಉತ್ತಮ ದರ್ಜೆಯ ಕುಂಡಲಿ ಇರುತ್ತದೆ. ಈ ಎರಡೂ ಗ್ರಹಗಳ ಶುಭ ಸಂಬಂಧವು ರವಿಯೊಂದಿಗೆ ಇದ್ದರಂತೂ ಉತ್ತಮ ಲಾಭಯೋಗಕಾರಕವಾಗುತ್ತದೆ.

ಈ ಲಗ್ನ ಆಕಸ್ಮಿಕ ಧನಕಾರಕ ಗ್ರಹವೆಂದರೆ ಬುಧ ಹಾಗೂ ಗುರು ಇರುತ್ತಾರೆ. ಆದ್ದರಿಂದ ವೃಷಭ ಲಗ್ನಕ್ಕೆ ಆಗುವ ಈ ಗ್ರಹಗಳ ಸ್ಥಿತಿಯು ಸಿಂಹ ಲಗ್ನಕ್ಕೂ ಆಗುತ್ತದೆ. ಅಂದರೆ ಬುಧ-ಗುರುವಿನ ಶುಭಯೋಗ ಶುಭ ಸಂಬಂಧ ಉತ್ತಮ ಲಾಭಯೋಗವಾಗುತ್ತದೆ.

ಕನ್ಯಾ ಲಗ್ನ :

ಈ ಲಗ್ನಕ್ಕೆ ಶುಕ್ರ, ಬುಧ, ಗುರು ಹಾಗೂ ಶನಿ ಈ ನಾಲ್ಕು ಗ್ರಹಗಳು ರಾಜಯೋಗಕಾರಕಗಳಿದ್ದು. ಈ ಗ್ರಹಗಳ ರಾಶಿಬಲ, ಸ್ಥಾನಬಲ, ದಿಕ್‌ಬಲ, ಇವುಗಳ ಮೇಲಿನ ಜಾತಕದ ಯೋಗ್ಯತೆಯು ಅವಲಂಬಿಸಿರುತ್ತದೆ.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹಗಳೆಂದರೆ ಮಂಗಳ, ಶನಿ, ಶುಕ್ರ ಚಂದ್ರರಿರುತ್ತಾರೆ.

ಮಿಥುನ ಲಗ್ನಕ್ಕೆ ಆಗುವ ಗ್ರಹಯೋಗವೇ ಈ ಲಗ್ನಕ್ಕೂ ಆಗುತ್ತದೆ. ಶುಕ್ರ–ಶನಿ ಹಾಗೂ ಚಂದ್ರರ ಶುಭಯೋಗದಿಂದ ಸಟ್ಟಾ, ಲಾಟರಿ. ರೇಸ ಮೊದಲಾದವುಗಳಿಂದ ಧನಪ್ರಾಪ್ತಿಯಾಗುತ್ತದೆ. ಮತ್ತು ಶುಕ್ರ–ಮಂಗಳ, ಶುಕ್ರ–ಚಂದ್ರ ಹಾಗೂ ಚಂದ್ರ–ಮಂಗಳ ಇವರ ಶುಭಯೋಗದಿಂದ ಸ್ತ್ರೀಧನ ಮಾರ್ಸ್ಯಾಧನ ಮೊದಲಾದವುಗಳು ಪ್ರಾಪ್ತಿಯಾಗುತ್ತವೆ

ತುಲಾ ಲಗ್ನ

ಈ ಲಗ್ನಕ್ಕೆ ಶುಕ್ರ, ಶನಿ. ಚಂದ್ರ, ಬುಧ, ಮಂಗಳ ಈ ಐದು ಗ್ರಹಗಳು ರಾಜಯೋಗಕಾರಕ ಗ್ರಹಗಳಿರುತ್ತವೆ. ಈ ಗ್ರಹಗಳ ರಾಶಿಬಲ, ಸ್ಥಾನಬಲ, ಕಾಲಬಲ, ದಿಕ್‌ಬಲ, ಶುಭಾಶುಭ ಸಂಬಧಯೋಗ, ಇವುಗಳ ಮೇಲೆ ಜಾತಕದ ಯೊಗ್ಯತೆಯು ಅವಲಂಬಿಸಿರುತ್ತದೆ. ಚಂದ್ರ–ಶುಕ್ರ ಚಂದ್ರ–ಶನಿ. ಶನಿ–ಬುಧ ಬುಧ-ಶುಕ್ರ. ಚಂದ್ರ–ಮಂಗಳ. ಶುಕ್ರ–ಮಂಗಳ ಇವರ ಕೇಂದ್ರ ತ್ರಿಕೋಣ ಯುತಿ ವಿಶೇಷವಾಗಿ ಧನಲಾಭವನ್ನು ಸೂಚಿಸುತ್ತದೆ. ಈ ಗ್ರಹಗಳು ರವಿಯೊಂದಿಗೆ ಶುಭಯೋಗ ಮಾಡುತ್ತಿದ್ದರೆ ಆಕಸ್ಮಿಕವಾಗಿ ಸರಕಾರದಿಂದ ಧನಲಾಭವಾಗುತ್ತದೆ.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹಗಳೆಂದರೆ ಮಂಗಳ, ಶನಿ, ಶುಕ್ರ ಹಾಗೂ ರವಿ ಈ ನಾಲ್ಕು ಗ್ರಹಗಳಿರುತ್ತವೆ. ಮೇಷ ಲಗ್ನಕ್ಕೆ ಆಗುವ ಶುಭಾಶುಭ ಯೋಗವು ಈ ಲಗ್ನಕ್ಕೆ ಆಗುವದರಿಂದ ಇದಕ್ಕಾಗಿ ಪ್ರತ್ಯೇಕ ಬರೆಯಬೇಕಾಗಿಲ್ಲ. ಫಲ, ಕಾಲನಿರ್ಣಯ, ಮೊದಲಾದವುಗಳನ್ನು ಮೇಷ, ವೃಷಭ ಮಿಥುನ ಈ ಲಗ್ನಗಳಿಗೆ ಮಾತ್ರ ವಿವರಿಸಲಾಗಿದೆ. ಇದರಂತೆ ಉಳಿದ ಲಗ್ನಗಳನ್ನು ನೋಡಬೇಕು.

ವೃಶ್ಚಿಕ ಲಗ್ನ

ಈ ಲಗ್ನಕ್ಕೆ ರವಿ, ಚಂದ್ರ, ಗುರು, ಮಂಗಳ, ಈ ನಾಲ್ಕು ಗ್ರಹಗಳು ರಾಜಯೋಗಕಾರಕವಿರುತ್ತವೆ. ಈ ಗ್ರಹಗಳ ರಾಶಿಬಲ. ಸ್ಥಾನಬಲ, ದಿಕ್-

ಬಲ, ಕಾಲಬಲ, ಶುಭಾಶುಭ ಸಂಬಂಧಯೋಗ ಇವುಗಳ ಮೇಲೆ ಜಾತಕದ ಯೋಗ್ಯತೆಯೂ ಅವಲಂಬಿಸಿರುತ್ತದೆ. ಈ ಲಗ್ನದ ದಶಮದಲ್ಲಿ ಗುರು-ಚಂದ್ರ ಗುರು-ರವಿ, ಚಂದ್ರ-ಮಂಗಳ ಈ ಯುತಿಗಳು ಬಹಳೇ ಧನಲಾಭಯೋಗ ಕಾರಕವಿರುತ್ತವೆ.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹವೆಂದರೆ ಗುರು, ಬುಧ, ಇದ್ದು, ಗುರು-ಬುಧರ ಯಾವುದೇ ಯೋಗವು ಆಕಸ್ಮಿಕ ಧನಯೋಗಕಾರಕವನ್ನು ಸೂಚಿಸುತ್ತದೆ.

ಈ ಗುರು-ಬುಧರ ಯೋಗವು ವೃಷಭ ಲಗ್ನಕ್ಕೂ ಇರುವದರಿಂದ ಇದರ ನಿಯಮವು ವೃಷಭ ಲಗ್ನದಲ್ಲಿ ಪೂರ್ಣವಾಗಿ ವಿವೇಚಿಸಿದೆ.

ಧನು ಲಗ್ನ

ಈ ಲಗ್ನಕ್ಕೆ ರವಿ,ಬುಧ ಹಾಗೂ ಗುರು.ಮಂಗಳ ಈ ನಾಲ್ಕು ಗ್ರಹಗಳು ರಾಜಯೋಗಕಾರಕ ಗ್ರಹಗಳಿರುತ್ತವೆ. ಸೂರ್ಯ-ಬುಧ, ಗುರು-ಮಂಗಳ ಗುರು-ರವಿ. ಗುರು-ಬುಧ, ರವಿ-ಮಂಗಳ, ರವಿ-ಗುರು ಇವರ ಕೇಂದ್ರ, ತ್ರಿಕೋಣ. ಯುತಿ, ಅನ್ಯೋನ್ಯ ಸಂಬಂಧ, ಮೊದಲಾದ ಯಾವುದೇ ಶುಭ ಯೋಗವಿದ್ದರೂ ಉತ್ತಮ ಧನಯೋಗಕಾರಕವಾಗುತ್ತದೆ.

ರವಿ, ಬುಧ. ಗುರು, ಈ ಮೂರೂ ಗ್ರಹಗಳ ಶುಭಸಂಬಂಧವು, ಶನಿ ಯೊಂದಿಗೆ ಇದ್ದರೆ ಆಕಸ್ಮಿಕ ದ್ರವ್ಯಪ್ರಾಪ್ತಿ ತೋರುತ್ತದೆ.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹವೆಂದರೆ ಚಂದ್ರ. ಮಂಗಳ, ಶನಿ, ಶುಕ್ರ ಈ ನಾಲ್ಕು ಗ್ರಹಗಳಿರುತ್ತವೆ. ಮಿಥುನ ಲಗ್ನದ ಯೋಗಕಾರಕ ಗ್ರಹಗಳೇ ಧನು ಲಗ್ನದಲ್ಲಿರುವದರಿಂದ ಮಿಥುನ ಲಗ್ನದ ನಿಯಮಗಳನ್ನು ನೋಡಬೇಕು. ಮಂಗಳ, ಶುಕ್ರ, ಶನಿ, ಇವುಗಳ ಶುಭಯೋಗದಿಂದ ಸಟ್ಟಾ, ರೇಸ, ಲಾಟರಿ ಇವುಗಳಿಂದ ಧನಪ್ರಾಪ್ತಿಯಾಗುತ್ತದೆ. ಚಂದ್ರ, ಶುಕ್ರ, ಶನಿ ಈ ಗ್ರಹಗಳ ಶುಭಯೋಗದಿಂದ ಸ್ತ್ರೀಧನ, ವಾರಸಾ, ದತ್ತಕ ಮೊದಲಾದವು ಗಳಿಂದ ಧನಪ್ರಾಪ್ತಿ ತೋರಿಸುತ್ತದೆ.

ಮಕರ ಲಗ್ನ :

ಈ ಲಗ್ನಕ್ಕೆ ಶುಕ್ರ, ಬುಧ, ಶನಿ, ಮಂಗಳ ಈ ನಾಲ್ಕು ಗ್ರಹಗಳು ರಾಜಯೋಗಕಾರಕ ಗ್ರಹಗಳಿರುತ್ತವೆ. ಈ ಗ್ರಹಗಳ ರಾಶಿಬಲ, ಸ್ಥಾನಬಲ, ಕಾಲಬಲ, ದಿಕ್‌ಬಲ, ಶುಭಾಶುಭ ಸಂಬಂಧಯೋಗ ಇವುಗಳ ಮೇಲಿಂದ ಜಾತಕದ ಯೋಗ್ಯತೆಯು ಅವಲಂಬಿಸಿರುತ್ತದೆ. ಶುಕ್ರನೊಬ್ಬನೇ ಬಲಾಢ್ಯನಾಗಿ ಕುಂಡಲಿಯಲ್ಲಿದ್ದರೆ ಉತ್ತಮ ದ್ರವ್ಯಲಾಭವನ್ನು ಸೂಚಿಸುತ್ತದೆ. ಶುಕ್ರ-ಬುಧ, ಶುಕ್ರ-ಶನಿ ಇವುಗಳ ಕೇಂದ್ರ-ತ್ರಿಕೋಣಯೋಗ ಯುತಿ, ಪ್ರತಿ-ಯುತಿಯು ಕೂಡ ಉತ್ತಮ ಧನಯೋಗವನ್ನು ಸೂಚಿಸುತ್ತದೆ. ಈ ಲಗ್ನಕ್ಕೆ ಶನಿ-ಮಂಗಳರ ಅಶುಭ ಸಂಬಂಧವಿದ್ದರೆ ಹಾನಿಕಾರಕವಿರುತ್ತದೆ.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹವೆಂದರೆ ರವಿ, ಶುಕ್ರ, ಮಂಗಳ, ಶನಿ ಈ ನಾಲ್ಕು ಗ್ರಹಗಳು ಇರುತ್ತವೆ. ಈ ಲಗ್ನದ ನಿಯಮವು ಮೇಷ ಲಗ್ನದ ನಿಯಮದಂತಿರುವವರಿಂದ ಮೇಷ ಲಗ್ನದ ನಿಯಮವನ್ನು ಪರಿಶೀಲಿಸಬೇಕು. ರವಿ-ಮಂಗಳ-ಶುಕ್ರ ಈ ಗ್ರಹಗಳು ಶುಭಯೋಗದಿಂದ ಸ್ತ್ರೀಧನ, ವಾರಸಾಧನ, ದತ್ತಕ ಧನ ಮೊದಲಾದ ದ್ರವ್ಯಯೋಗವೂ ಶುಕ್ರ-ರವಿ, ರವಿ-ಮಂಗಳ ರವಿ-ಚಂದ್ರ, ಶುಕ್ರ-ಚಂದ್ರ ಇವರ ಶುಭಯೋಗದಿಂದ ಸಟ್ಟಾ, ಲಾಟರಿ, ರೇಸ ಮೊದಲಾದವುಗಳಿಂದ ಧನಪ್ರಾಪ್ತಿಯಾಗುತ್ತದೆ.

ಕುಂಭ ಲಗ್ನ :

ಈ ಲಗ್ನಕ್ಕೆ ಶುಕ್ರ, ಮಂಗಳ, ಶನಿ, ಬುಧ, ರವಿ, ಈ ಐದು ಗ್ರಹಗಳು ರಾಜಯೋಗಕಾರಕ ಗ್ರಹಗಳಿರುತ್ತವೆ. ಈ ಗ್ರಹಗಳ ರಾಶಿಬಲ, ಸ್ಥಾನಬಲ ಶುಭಾಶುಭ ಸಂಬಂಧಯೋಗ ಇವುಗಳ ಮೇಲೆ ಕುಂಡಲಿಯ ಯೋಗ್ಯತೆಯು ಅವಲಂಬಿಸಿರುತ್ತದೆ. ಶುಕ್ರ-ಮಂಗಳರ ಶುಭಯೋಗ ಶುಕ್ರ-ಶನಿಯರ ಯುತಿ ಹಾಗೂ ಬುಧ, ಶುಕ್ರರ ಯುತಿಯು ಗುರುವಿನೊಡನೆ ಶುಭಸಂಬಂಧವಾದರೆ ಅತ್ಯುತ್ತಮ ಧನಲಾಭಯೋಗವಾಗುತ್ತದೆ. ಗುರು, ಮಂಗಳಯೋಗವು ಕೂಡ ಉತ್ತಮ ಧನಯೋಗವನ್ನು ಸೂಚಿಸುತ್ತದೆ.

ಈ ಲಗ್ನಕ್ಕೆ ಆಕಸ್ಮಿಕ ಧನಯೋಗಕಾರಕವೆಂದರೆ ಬುಧ, ಗುರು ಇರುವದರಿಂದ ಈ ಬುಧ-ಗುರು ಗ್ರಹಗಳ ಶುಭಸಂಬಂಧವು ರಾಜಯೋಗಕಾರಕ

ಗ್ರಹಗಳೊಂದಿಗೆ ಆದುದಾದರೆ ಆಕಸ್ಮಿಕ ದ್ರವ್ಯಯೋಗವನ್ನು ಸೂಚಿಸುತ್ತದೆ. ಈ ಲಗ್ನದ ನಿಯಮವು ವೃಷಭ ಲಗ್ನದ ನಿಯಮದಂತೆ ಇರುವದರಿಂದ ಅವನ್ನು ಪೂರ್ಣವಾಗಿ ಪರಿಶೀಲಿಸಬೇಕು.

**ಮೀನ ಲಗ್ನ :**

ಈ ಲಗ್ನಕ್ಕೆ ಚಂದ್ರ, ಮಂಗಳ, ಗುರು, ಬುಧ ಈ ನಾಲ್ಕು ಗ್ರಹಗಳು ರಾಜಯೋಗಕಾರಕ ಗ್ರಹಗಳಿರುತ್ತವೆ. ಈ ಗ್ರಹಗಳ ರಾಶಿಬಲ, ಸ್ಥಾನಬಲ, ದಿಕ್‌ಬಲ, ಶುಭಾಶುಭ ಸಂಬಂಧ ಇವುಗಳ ಮೇಲೆ ಕುಂಡಲಿಯ ಯೋಗ್ಯತೆಯು ಅವಲಂಬಿಸಿರುತ್ತದೆ. ಗುರು-ಮಂಗಳ, ಗುರು-ಚಂದ್ರ, ಬುಧ-ಗುರು, ಚಂದ್ರ-ಬುಧ ತ್ರಿಕೋಣ ಇವರಯೋಗ, ಪ್ರತಿಯೋಗ, ಅನ್ಯೋನ್ಯ ಸಂಬಂಧವು ಕೇಂದ್ರದಲ್ಲಾಗಲಿ ಅಥವಾ ಲಾಭ ಧನದಲ್ಲಿಯಾದರೂ ಉತ್ತಮ ಧನಯೋಗವು ಆಗುತ್ತದೆ.

ಈ ಲಗ್ನಕ್ಕೆ ಆಕಸ್ಮಿಕ ಧನಕಾರಕ ಗ್ರಹಗಳೆಂದರೆ ಶುಕ್ರ, ಚಂದ್ರ, ಮಂಗಳ ಶನಿ ಈ ನಾಲ್ಕು ಗ್ರಹಗಳಿರುತ್ತವೆ. ಇವುಗಳಲ್ಲಿ ಚಂದ್ರ-ಮಂಗಳ ಈ ಗ್ರಹಗಳು ರಾಜಯೋಗಕಾರಕ ಗ್ರಹಗಳಲ್ಲಿಯೂ ಇರುತ್ತವೆ. ಗುರುವಿನ ಬಲಾಬಲವನ್ನು ಈ ಲಗ್ನಕ್ಕೆ ಅವಶ್ಯ ನೋಡಬೇಕು. ಶುಕ್ರ, ಮಂಗಳ, ಶನಿ ಈ ಗ್ರಹಗಳ ಶುಭಯೋಗದಿಂದ ಸ್ತ್ರೀಧನ, ವಾರ್ಸಾ ಧನ, ಮೃತ್ಯುಪತ್ರಧನ ಮೊದಲಾದ ಯೋಗಗಳನ್ನು ನೋಡಬೇಕಾಗುತ್ತದೆ. ಚಂದ್ರ, ಶುಕ್ರ ಮಂಗಳ, ಶನಿ ಈ ಗ್ರಹಗಳ ಶುಭಯೋಗದಿಂದ ಸಟ್ಟಾ, ಲಾಟರಿ, ರೇಸ ಮೊದಲಾದವುಗಳಿಂದ ಧನಪ್ರಾಪ್ತಿಯನ್ನು ಸೂಚಿಸುತ್ತದೆ.

ವಿ. ಸೂ :— ಫಲ, ಕಾಲನಿರ್ಣಯ ಹಾಗೂ ಸಾಮಾನ್ಯ ನಿಯಮ ಇವುಗಳನ್ನು ಮೇಷ, ವೃಷಭ, ಮಿಥುನ ಈ ಲಗ್ನಗಳಿಗೆ ಮಾತ್ರ ವಿಗರಿಸಲಾಗಿದೆ. ಇದರಂತೆ ಇತರ ಲಗ್ನಗಳನ್ನು ನೋಡಬೇಕು.



# ಸ್ಥಾನಗಳ ಮೇಲಿಂದ

ಆಕಸ್ಮಿಕ ದ್ರವ್ಯಯೋಗದ ಬಗ್ಗೆ ವಿಚಾರಿಸುವಾಗ ಸ್ಥಾನಗಳಿಗೂ ಬಹಳ ಮಹತ್ವವಿದೆ. ಏಕೆಂದರೆ ಸ್ಥಾನದ ಮಹತ್ವವು ಭಾವದಿಂದ ತಿಳಿಯುತ್ತದೆ. ಮತ್ತು ಬೇರೆ ಬೇರೆ ಸ್ಥಾನಗಳು ಭಿನ್ನ ಭಿನ್ನ ಪ್ರಕಾರದ ಧನಯೋಗವನು ಸೂಚಿಸುತ್ತವೆ.

(೧) ಧನಸ್ಥಾನದಿಂದ ಹಿರಿಯರು ಮಾಡಿಟ್ಟ ( ಪಿತ್ರಾರ್ಜಿತ ಆಸ್ತಿ ) ಸುವರ್ಣ, ರತ್ನ, ವಜ್ರ ಮೊದಲಾದ ಆಭರಣಗಳಿಂದ ಬರುವ ಧನಲಾಭವು ಇರುತ್ತದೆ.

(೨) ತೃತೀಯ ಸ್ಥಾನದಿಂದ ಬಂಧು–ಭಗಿನಿಯರಿಂದ, ನೌಕರ–ಚಾಕರರಿಂದ, ವಾದ–ಸ್ಪರ್ಧೆ, ಚುನಾವಣೆ ಮೊದಲಾದವುಗಳಿಂದ ಬರುವ ಧನ ಲಾಭವನ್ನು ಸೂಚಿಸುತ್ತವೆ.

(೩) ಚತುರ್ಥ ಸ್ಥಾನದಿಂದ ಸ್ಥಾವರ, ಇಸ್ಟೇಟ, ಹೊಲ–ಮನೆ ವಾಹನ, ತಾಯಿಯ ಕಡೆಯಿಂದ, ಭೂಗತ ಹಾಗೂ ದಿವಾಣೀ ಫೌಜದಾರಿ ಮೊದಲಾದವುಗಳಿಂದ ಧನಯೋಗವನ್ನು ಸೂಚಿಸುತ್ತವೆ,

(೪) ಪಂಚಮ ಸ್ಥಾನದಿಂದ ಕಲಾ, ಕೌಶಲ್ಯ, ಸಾಹಿತ್ಯ, ಸಂಗೀತ, ಪೋಸ್ಟ, ಬ್ಯಾಂಕ ಮೊದಲಾದವುಗಳಲ್ಲಿಟ್ಟ ಠೇವು, ಹಣ, ದತ್ತಕ, ರೇಸ, ಪ್ರಾಯಿಜ ಬಾಂಡ, ಸರ್ಕಾರದಿಂದ ಬರುವ ಹಣ ಮೊದಲಾದವುಗಳಿಂದ ದ್ರವ್ಯಯೋಗವನ್ನು ಸೂಚಿಸುತ್ತದೆ.

(೫) ಷಷ್ಠಸ್ಥಾನದಿಂದ ಮಾಸಾಹಕ್ಕು, ಸೋದರಮಾವಂದಿರಿಂದ ಅಥವಾ ತಾಯಿಯ ಬಳಗದಿಂದ ದ್ರವ್ಯಯೋಗವನ್ನು ಸೂಚಿಸುತ್ತದೆ.

(೬) ಸಪ್ತಮ ಸ್ಥಾನದಿಂದ ಪತ್ನಿಯಿಂದಾಗಲೀ ಪರಸ್ತ್ರೀಯರಿಂದಾಗಲೀ, ವ್ಯಾಪಾರದಿಂದಾಗಲೀ, ಕೋರ್ಟು ಕಚೇರಿಯಿಂದಾಗಲೀ; ಪರದೇಶದ ಜನರಿಂದಾಗಲಿ ಮೊದಲಾದವುಗಳಿಂದ ದ್ರವ್ಯಯೋಗವನ್ನು ಸೂಚಿಸುತ್ತದೆ.

(೭) ಅಷ್ಟಮಸ್ಥಾನದಿಂದ ಮೃತ್ಯುಪತ್ರ, ಪರಸ್ತ್ರೀಯರಿಂದ (ಜಾರಸ್ತ್ರೀ) ಕಳವು ದರೋಡೆಯಿಂದ ಬರುವ ಹಣ ಅವ್ಯವಹಾರ, ಮೋಸ, ಅನೀತಿ (ಲಂಚ) ಸಟ್ಟಾ ಲಾಟರೀ, ಕಂಟ್ರಾಕ್ಟ ವರದಕ್ಷಿಣೆ. ಹೆಣ್ಣು ಕೊಟ್ಟ ಮಾವನ ಹಣ ಮೊದಲಾದವುಗಳಿಂದ ದ್ರವ್ಯಯೋಗವನ್ನು ಸೂಚಿಸುತ್ತದೆ.

(೮) ಭಾಗ್ಯಸ್ಥಾನದಿಂದ ಸರ್ಕಾರದಿಂದಾಗಲೀ ಬೇರೆ ಸಂಘ ಸಂಸ್ಥೆಗಳಿಂದ ಬರುವ ಪಾರಿತೋಷಕ, ಬಹುಮಾನ-ಬಕ್ಷೀಸದಿಂದಾಗಲೀ, ಪರದೇಶದಿಂದ ಬರುವ ಹಣ, ಪ್ರಾಯಿಜಬಾಂಡ, ನೊಬೆಲ್ ಪ್ರಾಯಿಜ, ದತ್ತಕ ವಾರ್ಸ, ಇತ್ಯಾದಿಗಳಿಂದ ಬರುವ ದ್ರವ್ಯಯೋಗವನ್ನು ಸೂಚಿಸುತ್ತದೆ.

(೯) ದಶಮ ಸ್ಥಾನದಿಂದ ಉದ್ಯೋಗ-ವ್ಯವಹಾರ, ತಂದೆಯಿಂದ, ನೌಕರಿ, (Service) ದತ್ತಕ, ಪ್ರಾಯಿಜಬಾಂಡ, ಬೋನಸ, ಗ್ರಾಚ್ಯುಯಿಟಿ, ಪೆನಶನ್ ಇತ್ಯಾದಿಗಳಿಂದ ಬರುವ ಧನಯೋಗವನ್ನು ಸೂಚಿಸುತ್ತದೆ.

(೧೦) ಲಾಭಸ್ಥಾನದಿಂದ ಮಿತ್ರರಿಂದಾಗಲೀ ಅನೇಕ ಸಂಘ-ಸಂಸ್ಥೆಗಳಿಂದಾಗಲೀ, ಮೊದಲಾದವುಗಳಿಂದ ದ್ರವ್ಯಯೋಗವನ್ನು ಸೂಚಿಸುತ್ತದೆ. ಹೀಗೆ ಮೇಲೆ ತೋರಿಸಿದ ೧೦ ಸ್ಥಾನಗಳಿಂದ ದ್ರವ್ಯಯೋಗದ ಬಗ್ಗೆ ವಿಚಾರಿಸಬೇಕಾಗುತ್ತದೆ.

ಜಾತಕದಲ್ಲಿರುವ ೧೨ ಸ್ಥಾನಗಳಲ್ಲಿ ಲಗ್ನ, ಪಂಚಮ, ನವಮ ಇವು ಪ್ರವೃತ್ತಿ ತ್ರಿಕೋಣಗಳು. ಇವು ಉದ್ಯೋಗಗಳ ಮೂಲಕ ಧನಪ್ರಾಪ್ತಿಯನ್ನು ಸೂಚಿಸುತ್ತವೆ.

ದ್ವಿತೀಯ, ದಶಮ, ಷಷ್ಠ ಇವು ಧನ ತ್ರಿಕೋಣಗಳು. ಇವುಗಳಿಂದ ಸಾಂಪತ್ತಿಕ ಸ್ಥಿತಿಗಳನ್ನು ಸೂಚಿಸುತ್ತದೆ.

ತೃತೀಯ, ಸಪ್ತಮ, ಏಕಾದಶ ಇವು ಆಪ್ತ- ಮಿತ್ರ-ಇಷ್ಟರಿಂದಾಗಲೀ, ಪ್ರಾಪಂಚಿಕ ಹಾಗೂ ಸಾಮಾಜಿಕ ಜನರಿಂದಾಗಲೀ, ಧನವನ್ನು ಸೂಚಿಸುತ್ತದೆ.

ಚತುರ್ಥ. ಅಷ್ಟಮ, ದ್ವಾದಶ ಇವು ನಿವೃತ್ತಿ ತ್ರಿಕೋಣಗಳು, ಇವುಗಳಿಂದ ಪರಾಕ್ರಮ, ಕರ್ಜಬಗಾರ, ಸ್ಥಾವರ–ಇಸ್ಟೇಟ ಮೂಲಕ ಮೊದಲಾದವುಗಳಿಂದ ಬರುವ ಹಣವ ಧನಯೋಗವನ್ನು ಸೂಚಿಸುತ್ತದೆ.

**ಆಕಸ್ಮಿಕ ಧನಲಾಭದ ಪ್ರಕಾರಗಳು :**

ಯಾರೊಬ್ಬರ ಜಾತಕವನ್ನು ಕೈಯಲ್ಲಿ ತೆಗೆದುಕೊಂಡ ಕೂಡಲೆ ಆಕಸ್ಮಿಕ ದ್ರವ್ಯಯೋಗವಿದೆಯೋ? ಇಲ್ಲವೋ ಎಂಬುದನ್ನು ಪರಿಶೀಲಿಸಿದ ನಂತರ ಯಾವ ಪ್ರಕಾರದ್ದೆಂಬುದನ್ನು ತದನಂತರ ನಿರ್ಣಯಿಸಬೇಕು. ಆಕಸ್ಮಿಕ ಧನಯೋಗದಲ್ಲಿ ಅನೇಕ ಪ್ರಕಾರಗಳಿವೆ. ಅವುಗಳಲ್ಲಿ ಮುಖ್ಯವಾದ್ವುಗಳನ್ನು ಕೆಳಗೆ ಕೊಡಲಾಗಿದೆ.

(೧) ಸ್ತ್ರೀಧನ, (೨) ವಾರ್ಸಾ, ಬಕ್ಷೀಸ, ಮೃತ್ಯುಪತ್ರ, ದತ್ತಕ, (೩) ಲಾಟರೀ, ಸಟ್ಟಾ, ರೇಸ, ಭೂಗತ, (೪) ಸರ್ಕಾರದಿಂದ ಬರುವ ಪಾರಿತೋಷಕ, ಬಹುಮಾನ ಇಲ್ಲವೇ ಪ್ರಾಯಿಜಬಾಂಡ ಇತ್ಯಾತಿ. (೫) ಸಮಾಜದ ಜನರಿಂದ ಲಂಚ ಮೊದಲಾದ ಅನೀತಿ ಮಾರ್ಗದಿಂದ (೬) ಕಾಣಿಕೆ ಹಾಗೂ ಸತ್ಕಾರ್ಯದಿಂದ ಹೀಗೆ ಅನೇಕ ಪ್ರಕಾರಗಳಿವೆ.

ಆಕಸ್ಮಿಕ ಧನಯೋಗದ ಬಗ್ಗೆ ವಿಚಾರಿಸುವಾಗ ಪಂಚಮ, ಅಷ್ಟಮ ಎರಡೂ ಸ್ಥಾನಗಳನ್ನು ಪರಿಶೀಲಿಸಬೇಕು. ನಮ್ಮ ಪುರಾತನ ಜ್ಯೋತಿಷಿಗಳು ಆಕಸ್ಮಿಕ ಧನಯೋಗದ ಬಗ್ಗೆ ವಿಚಾರಿಸುವಾಗ ಅಷ್ಟಮ ಸ್ಥಾನದಿಂದಲೇ ನಿರ್ಧರಿಸಿದ್ದಾರೆ.

ಪಾಶ್ಚಿಮಾತ್ಯ ಜ್ಯೋತಿರ್ವಿದರು ಹಾಗೂ ಇತ್ತೀಚಿನ ಪೌರ್ವಾತ್ಯ ಜೋತಿರ್ವಿದರು ಆಕಸ್ಮಿಕ ದ್ರವ್ಯಯೋಗದ ಬಗ್ಗೆ ಪಂಚಮ ಸ್ಥಾನವನ್ನು ಪರಿಶೀಲಿಸಬೇಕು ಎಂಬ ಅಭಿಪ್ರಾಯುದವರಾಗಿದ್ದಾರೆ.

ಇನ್ನು ನಮ್ಮ ಅನುಭವದ ಪ್ರಕಾರ ಎರಡೂ ಸ್ಥಾನವನ್ನು ಕೂಲಂಕುಷವಾಗಿ ಪರಿಶೀಲಿಸಬೇಕು. ಏಕೆಂದರೆ ಅಷ್ಟಮ ಸ್ಥಾನ ಇದು ಕುಟುಂಬ ಸ್ಥಾನದ ಧನಸ್ಥಾನವಿರುತ್ತದೆ. ಪತ್ನಿಯ ಕಡೆಯಿಂದಾಗಲಿ ಮೃತ್ಯುಪತ್ರದಿಂದಾಗಲೀ ಸಟ್ಟಾ–ಲಾಟರೀ, ನ್ಯೂಯಾರ್ಕ ಧಾರಣೆ, ಲಂಚ, ಮೊದಲಾದ ಆಕಸ್ಮಿಕ

ಹಾಗೂ ಆಕಲ್ಪಿತ, ಅನಿಯಮಿತ, ಅಮರ್ಯಾದಿತ ಮೊದಲಾದ ದ್ರವ್ಯ ಯೋಗ ಸೂಚಕ ರೀತಿಗಳಿಂದಾಗಲೀ ಧನಲಾಭವನ್ನು ಸೂಚಿಸುತ್ತದೆ.

ಪಂಚಮ ಸ್ಥಾನ ಇದು ಮನುಷ್ಯನ ಭಾವನಾಕಾರಕ ಸ್ಥಾನವಿರುತ್ತದೆ. ಮನಸ್ಸಿಗೆ ಬಾರದೇ ಯಾವ ಕಾರ್ಯವೂ ಆಗುವದಿಲ್ಲ. ಇಂದು ಮನಸ್ಸಿನಲ್ಲಿ ಬಂದಿತು, ತಿಕೀಟನ್ನು ಕೊಂಡುಕೊಂಡೆವು. ಕುದುರೆಯನ್ನು ಆರಿಸಿದವು ಹಾಗೂ ಅಂಕಿಯ ಮೇಲೆ ಹಣವನ್ನು ಹಚ್ಚಿದೇವು. ಈ ಎಲ್ಲ ಕಾರ್ಯಕ್ಕೆ ಪಂಚಮ ಸ್ಥಾನ ಮೂಲ ಹಾಗೂ ಮುಖ್ಯವಿರುವದರಿಂದ ಪಂಚಮಾಧೀಶ, ಪಂಚಮಸ್ಥಾನ, ಪಂಚಮಸ್ಥಾನಗಳಲಿರುವ ಗ್ರಹಗಳ ಬಲಾಬಲವನ್ನು ಸೂಚಿಸುತ್ತದೆ.

ಈ ಎರಡೂ ಸ್ಥಾನಗಳನ್ನು ಪರಿಶೀಲಿಸಿದ ನಂತರ ಈ ಎರಡೂ ಸ್ಥಾನಗಳ ಸಂಬಂಧ, ಭಾಗ್ಯ ಹಾಗೂ ಲಾಭಸ್ಥಾನದೊಂದಿಗೆ ಹೇಗಿದೆ ಎಂಬುದನ್ನು ಕೂಲಂಕಷವಾಗಿ ನೋಡಬೇಕು.

**ಸ್ತ್ರೀಧನ :**

ಸ್ತ್ರೀಧನ ಅಂದರೆ ಸ್ತ್ರೀಯರಿಂದ ಬರುವ ಧನ, ಇದರಲ್ಲಿ ಅನೇಕ ಪ್ರಕಾರಗಳಿವೆ. ಸ್ತ್ರೀವಾರ್ಸಾ ಹಕ್ಕಿನಿಂದ ಬರುವ ಧನ, ದತ್ತಕಯೋಗದಿಂದ, ಬಕ್ಷೀಸ ಬಹುಮಾನ, ಮೃತ್ಯುಪತ್ರ ಇದಲ್ಲದೇ ಆಪ್ತ ಸ್ತ್ರೀಯರಿಂದ ಪರಸ್ತ್ರೀಯರಿಂದ ಪತ್ನಿಯರಿಂದ ಹೇಗೆ ಅನೇಕ ಪ್ರಕಾರಗಳಿವೆ.

೧) ಸ್ತ್ರೀ ವಾರ್ಸಾಹಕ್ಕಿನಿಂದ ಅಂದರೆ ತಾಯಿ, ಚಿಕ್ಕಮ್ಮ, ದೊಡ್ಡಮ್ಮ. ಇವರಿಂದ ೨) ಆಪ್ತ ಸ್ತ್ರೀಯರಿಂದ ಅಂದರೆ ಆಪ್ತೇಷ್ಟರಿಂದ ಅಕ್ಕ, ತಂಗಿ ಅತ್ತಿಗೆ, ಸೋದರತ್ತೆ ಇತ್ಯಾದಿ. ೩) ಪತ್ನಿಯಿಂದ ಅಥವಾ ಅಂದರೆ ಪತ್ನಿಯ ತವರುಮನೆಯಿಂದ ೪) ಪರಸ್ತ್ರೀಯರಿಂದ ೫) ಮೃತ್ಯುಪತ್ರ ಹೀಗೆ ಸ್ತ್ರೀಧನದಲ್ಲಿ ಅನೇಕ ಪ್ರಕಾರಗಳಿವೆ.

ಸ್ತ್ರೀಧನವಿದೆಯೋ ? ಇಲ್ಲವೆಂಬುದನ್ನು ನೋಡಬೇಕಾದರೆ ಮೂರು ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು. ಮೊದಲನೆಯದಾಗಿ ಧನಯೋಗ ಅರ್ಥಾತ ಕುಂಡಲಿಯ ಯೋಗ್ಯತೆ, ಹಾಗೂ ಸ್ತ್ರೀಕಾರಕರಾದ ಶುಕ್ರ-ಚಂದ್ರರ ಬಲಾಬಲ,

ಎರಡನೇಯದಾಗಿ ಆಕಸ್ಮಿಕ ಧನಲಾಭಯೋಗ, ಮೂರನೇಯದಾಗಿ ಲಗ್ನೇಶ ಹಾಗೂ ಸಪ್ತಮೇಶ ಮತ್ತು ಧನೇಶ ಹಾಗೂ ಅಷ್ಟಮೇಶ ಇವರ ಸಂಬಂಧ ಯಾವ ಸ್ಥಾನಾಧೀಶರೊಂದಿಗೆ ಹೇಗಿದೆ ಎಂಬುದನ್ನು ಅರಿತುಕೊಳ್ಳಬೇಕು.

ಯಾರ ಜಾತಕದಲ್ಲಿ ಸಪ್ತಮೇಶನು ಬಲವಂತನಿದ್ದು, ಲಗ್ನೇಶನೊಂದಿಗೆ ಶುಭ ಸಂಬಂಧವಿದ್ದರೆ ಅಥವಾ ಲಗ್ನೇಶ ಹಾಗೂ ಸಪ್ತಮೇಶರೊಂದಿಗೆ ಅಚಾನಕ ಧನಯೋಗಕಾರಕನ ಶುಭ ಸಂಬಂಧವಿದ್ದರೆ, ನಿಃಸಂಶಯವಾಗಿ ಸ್ವಸ್ತ್ರೀಯಿಂದ ಧನಲಾಭವಾಗುತ್ತದೆ.

ಅಷ್ಟಮೇಶನು ಬಲವಂತನಿದ್ದು, ಅವನೊಂದಿಗೆ ಶುಕ್ರ ಅಥವಾ ಚಂದ್ರ ಅಥವಾ ಶುಕ್ರಚಂದ್ರರು ಶುಭಯೋಗ ಮಾಡುತ್ತಿದ್ದು, ಅವರು (ಶುಕ್ರ-ಚಂದ್ರರು) ಯಾವ ಸ್ಥಾನದಲ್ಲಿರುವರೋ ಹಾಗೂ ಯಾವ ಭಾವದಲ್ಲಿರುವರೋ ಆ ಆ ಸ್ಥಾನಗಳ ಆ ಆ ಭಾವಗಳಂತೆ ಅಕಸ್ಮಿಕವಾಗಿ ದ್ರವ್ಯ ಲಾಭವಾಗುತ್ತದೆ. ಅಥವಾ ಅಷ್ಟಮೇಶನು ಯಾವ ಸ್ಥಾನದಲ್ಲಿರುವನೋ ಆ ಸ್ಥಾನದರ್ಶಕ ಸ್ತ್ರೀಯಿಂದ ಆಕಸ್ಮಿಕ ದ್ರವ್ಯ ಲಾಭವಾಗುತ್ತದೆ. ಅಥವಾ ಅಷ್ಟಮೇಶನೊಂದಿಗೆ ಯಾವ ಗ್ರಹದ ಶುಭ ಸಂಬಂಧವಿರುತ್ತದೆಯೋ ಆ ಗ್ರಹದ ಸ್ಥಾನದರ್ಶಕದಿಂದ ಅಚಾನಕ ದ್ರವ್ಯಲಾಭವಾಗುತ್ತದೆ.

ಸ್ತ್ರೀಧನದ ಬಗ್ಗೆ ವಿಚಾರಿಸುವಾಗ ಸ್ಥಾನದೃಷ್ಟಿಯಿಂದ ನೋಡಲಾಗಿ ಸಪ್ತಮಸ್ಥಾನ, ಅಷ್ಟಮಸ್ಥಾನ, ಚತುರ್ಥಸ್ಥಾನ ಷಷ್ಠಸ್ಥಾನ, ತೃತಿಯ ಸ್ಥಾನ ಭಾಗ್ಯಸ್ಥಾನಗಳ ಹಾಗೂ ಸ್ಥಾನಾಧೀಶರ ಮತ್ತು ಇವರ ಶುಭಾಶುಭ ಸಂಬಂಧವೂ ಲಾಭೇಶ ಮತ್ತು ಭಾಗ್ಯೇಶರೊಂದಿಗೆ ಹೇಗಿದೆ ಎಂಬುದನ್ನು ಪರಿಶೀಲಿಸಬೇಕು.

ಯೋಗ ದೃಷ್ಟಿಯಿಂದ ವಿಚಾರಿಸಿದರೆ ಚಂದ್ರ-ಶುಕ್ರ, ಶುಕ್ರ-ಮಂಗಳ ಚಂದ್ರ, ಮಂಗಳ, ಗುರು-ಚಂದ್ರ, ಗುರು-ಶುಕ್ರ, ಈ ಗ್ರಹಗಳ ಯೋಗವನ್ನು ನಾವು ಕಾಣುತ್ತೇವೆ ಆಕಸ್ಮಿಕವಾಗಿ ಸ್ತ್ರೀ ಧನವನ್ನು ಕೊಡುವ ಗ್ರಹಗಳೆಂದರೆ ಶುಕ್ರ, ಚಂದ್ರ, ಹಾಗೂ ಸ್ತ್ರೀ ರಾಶಿಯಲ್ಲಿದ್ದ ಗುರು ಅದರಲ್ಲಿಯೂ ವಿಶೇಷವಾಗಿ ಶುಕ್ರನು ಸ್ತ್ರೀ ಧನಕಾರಕನು.

## ಸ್ತ್ರೀ ಧನದಲ್ಲಿರುವ ಪ್ರಕಾರಗಳು

ಸ್ತ್ರೀ ಧನದಲ್ಲಿ ಅನೇಕ ಪ್ರಕಾರಗಳಿವೆ ಎಂಬುದನ್ನು ಹಿಂದೆ ಹೇಳಲಾಗಿದೆ. ಆದರೆ ಜಾತಕ ನೋಡಿದ ಕೂಡಲೇ ಯಾವ ಪ್ರಕಾರದ ಸ್ತ್ರೀಧನ ಲಭಿಸುವದು ನೋಡಬೇಕಾದರೆ ಅಷ್ಟಮೇಶನ ಶುಭ ಸಂಬಂಧವು ಯಾವ ಸ್ಥಾನಾಧೀಶ ನೊಂದಿಗೆ ಇರುತ್ತದೆಯೋ ಆ ಸ್ಥಾನದರ್ಶಕ ಸ್ತ್ರೀಯರಿಂದ ಲಾಭವಾಗುತ್ತದೆ. ಉದಾ – ಅಷ್ಟಮೇಶನು ಪಾಪಗ್ರಹವಿದ್ದು, ಪಾಪಗ್ರಹಗಳೊಂದಿಗೆ ಶುಭ ಸಂಬಂಧವಿದ್ದರೆ ಜಾರ ಸ್ತ್ರೀಯರಿಂದಅಥವಾ ವಿಧವಾ ಸ್ತ್ರೀಯರಿಂದ ಶುಭಗ್ರಹ ದೊಂದಿಗೆ ಶುಭ ಸಂಬಂಧವಿದ್ದರೆಸುಶೀಲ, ಸೌಭಾಗ್ಯವತಿ ಸ್ತ್ರೀಯರಿಂದ ಧನಲಾಭವಾಗುತ್ತದೆ.

ಸಪ್ತಮೇಶನು ಬಲಾಢ್ಯನಿದ್ದು. ಲಗ್ನೇಶನೊಂದಿಗೆ ಶುಭ ಸಂಬಂಧವಿದ್ದರೆ ಸ್ವಸ್ತ್ರೀಯರಿಂದ ಧನಲಾಭವಾಗುತ್ತದೆ. ಹೀಗೆ ಅಷ್ಟಮೇಶನು ಶುಭ ಸಂಬಂಧ ವಿರುವ ಸ್ಥಾನಾಧೀಶರ ಮೇಲೆ ಸಂಬಂಧ ಇರುತ್ತದೆಯೋ ಆ ಸ್ಥಾನದ ಭಾವದ ಪ್ರಕಾರ ಲಾಭವಾಗುತ್ತದೆಂಬುದನ್ನು ಅರಿಯಬೇಕು. ಎರಡನೆಯ ದಾಗಿ, ಸಂಬಂಧವಿರುವ ಸ್ಥಾನಾಧೀಶರ ಬಲಾಬಲ ಹಾಗೂ ಜಾತಕದಲ್ಲಿರುವ ಧನಯೋಗ ಇವುಗಳ ಮೇಲೆ ಅವಲಂಬಿಸಿರುತ್ತದೆ.

ಕೆಳಗೆ ಕಾಣಿಸಿದ ಯೋಗಗಳಿದ್ದರೆ ಸ್ತ್ರೀಧನ ಪ್ರಾಪ್ತವಾಗುತ್ತದೆ.

೧) ಸಪ್ತಮೇಶ ಸಪ್ತಮದಲ್ಲಿದ್ದರೆ, ೨) ಅಷ್ಟಮೇಶ ಅಷ್ಟಮದಲ್ಲಿದ್ದರೆ ೩) ಚತುರ್ಥೇಶ ಚತುರ್ಥದಲ್ಲಿದ್ದರೆ ೪) ತೃತಿಯೇಶ ತೃತೀಯದಲ್ಲಿದ್ದರೆ ೫) ಲಗ್ನೇಶ ಸಪ್ತಮೇಶರ ಅನ್ಯೋನ್ಯ ಯೋಗ ಅಥವಾ ಯುತಿ ೧, ೩, ೪, ೭ ಸ್ಥಾನಗಳಲ್ಲಿದ್ದರೆ ಅಥವಾ ಶುಭ ಸಂಬಂಧವಿದ್ದರೆ, ೬) ಸಪ್ತಮೇಶ ಅಷ್ಟಮೇಶರ ಅನ್ಯೋನ್ಯ ಯೋಗ ಅಥವಾ ಯುತಿ ೪, ೭, ೮, ಸ್ಥಾನದಲ್ಲಿದ್ದರೆ ಅಥವಾ ಶುಭ ಸಂಬಂಧವಿದ್ದರೆ ೭) ಚತುರ್ಥೇಶ ಅಷ್ಟಮೇಶರ ಅನ್ಯೋನ್ಯ ಯೋಗ ಅಥವಾ ಶುಭ ಸಂಬಂಧ ಅಥವಾ ಯುತಿ ೧, ೪, ೭, ೮, ೯ ಸ್ಥಾನ ದಲ್ಲಿದ್ದರೆ ೮) ಸಪ್ತಮೇಶ ಭಾಗ್ಯೇಶರ ಅನ್ಯೋನ್ಯ ಯೋಗ ಅಥವಾ ಶುಭ ಸಂಬಂಧಯೋಗ ಅಥವಾ ಯುತಿ ೧, ೪, ೭, ೮, ೯ ರಲ್ಲಿದ್ದರೆ ೯) ಭಾಗ್ಯೇಶ ಲಾಭೇಶರ ಅನ್ಯೋನ್ಯ ಯೋಗ ಅಥವಾ ಶುಭ ಸಂಬಂಧಯೋಗ ಅಥವಾ

ಯುತಿ ೪, ೭, ೫, ೯ ರಲ್ಲಿದ್ದರೆ ೧೦) ತೃತೀಯೇಶ ಅಷ್ಟಮೇಶರ ಶುಭ ಸಂಬಂಧ ಯೋಗ ಅಥವಾ ಯುತಿ ೩, ೮, ೯, ೧೧ ಅಥವಾ ಅನ್ಯೋನ್ಯ ಯೋಗವಿದ್ದರೆ ೧೧) ಷಷ್ಠೇಶ ಅಷ್ಟಮೇಶರ ಶುಭ ಸಂಬಂಧಯೋಗ ಅಥವಾ ಅನ್ಯೋನ್ಯಯೋಗ ಅಥವಾ ಯುತಿ ೬, ೮, ೯, ೧೧ ರಲ್ಲಿದ್ದರೆ ೧೨) ಶುಕ್ರ, ಚಂದ್ರ ಗುರು ಇವರು ಸ್ವಕ್ಷೇತ್ರ ಇಲ್ಲವೆ ಉಚ್ಚ ಅಥವಾ ಬಲಿಷ್ಠರಾಗಿ ೩, ೪, ೭, ೮, ೯. ಈ ಸ್ಥಾನದಲ್ಲಿದ್ದರೆ ಸ್ತ್ರೀಧನ ಲಾಭವಾಗುವದು.

**ದತ್ತಕ-ವಾರಸಾ, ಬಕ್ಷೀಸ ಮೃತ್ಯುಪತ್ರ ಇವುಗಳಿಂದ ಧನಲಾಭ**

ಈ ತರಹದ ಯೋಗ ನೋಡಬೇಕಾದರೆ ಜಾತಕದ ಮೂರು ಸಂಗತಿಗಳನ್ನು ನೆನಪಿನಲ್ಲಿಡಬೇಕು. ೧) ಜಾತಕದ ಯೋಗ್ಯತೆ ೨) ಬಲಾಢ್ಯ ಧನಯೋಗ. ೩) ಆಕಸ್ಮಿಕ ಧನಯೋಗ. ೪) ಅಷ್ಟಮೇಶ ಹಾಗೂ ಅಷ್ಟಮ ಸ್ಥಾನಗಳಿಗಿರುವ ಗ್ರಹಗಳ ಬಲಾಬಲ.

ಈ ಭಿನ್ನ ಭಿನ್ನ ಯೋಗಗಳಿಗೆ ಭಿನ್ನ ಭಿನ್ನ ಗ್ರಹಗಳೂ ಕಾರಕವಿರುವದಲ್ಲದೆ ಭಿನ್ನ ಭಿನ್ನ ಸ್ಥಾನಗಳು ಪೋಷಕವಾಗುತ್ತವೆ.

ಅಷ್ಟಮೇಶ ಹಾಗೂ ಲಗ್ನೇಶರ ಶುಭಯೋಗವಿದ್ದು, ಈ ಗ್ರಹಗಳು ರವಿ, ಗುರು, ಬುಧ ಗ್ರಹಗಳೊಂದಿಗೆ ಶುಭಯೋಗ ಮಾಡುತ್ತಿದ್ದರೆ ದತ್ತಕ, ವಾರಸಾ, ಬಕ್ಷೀಸ ಹಕ್ಕಿನಿಂದ ಅಥವಾ ಮೃತ್ಯುಪತ್ರದ್ವಾರದಿಂದ ಲಾಭವಾಗುತ್ತದೆ.

ಇವರೊಂದಿಗೆ ಚತುರ್ಥೇಶನ ಶುಭಯೋಗವಿದ್ದರೆ ಹೊಲ, ಮನೆ, ತೋಟಪಟ್ಟಿ, ಸ್ಥಾವರ— ಇಸ್ಟೇಟಗಳಿಂದ ಲಾಭವಾಗುತ್ತದೆ. ಅಷ್ಟಮೇಶನೊಂದಿಗೆ ರವಿ ಶುಭಯೋಗ ಮಾಡುತ್ತಿದ್ದರೆ ತಂದೆಯಿಂದಾಗಲೀ ತಂದೆಯು ಬಳಗದವರಿಂದಾಗಲೀ ಇಸ್ಟೇಟ ಸಿಗುತ್ತದೆ. ಇದರಂತೆ ಚಂದ್ರನು ಬಲವಂತನಿದ್ದು, ಶುಭಯೋಗ ಮಾಡುತ್ತಿದ್ದರೆ ತಾಯಿಂದಾಗಲಿ, ತಾಯಿಯು ಬಳಗದವರಿಂದಾಗಲೀ ಸ್ಥಾವರ ಇಸ್ಟೇಟ ಲಾಭವಾಗುತ್ತದೆ. ಶುಕ್ರನು ಶುಭಯೋಗ ಮಾಡುತ್ತಿದ್ದರೆ ಸ್ತ್ರೀಯರಿಂದ ಧನಲಾಭವೂ ಸಪ್ತಮೇಶನು ಶುಭಯೋಗ ಮಾಡುತ್ತಿದ್ದರೆ ಸ್ವಸ್ತ್ರೀಯರಿಂದ ಧನಲಾಭವೂ ಆಗುತ್ತದೆ. ಹೀಗೆ ಅಷ್ಟಮೇಶನ ಶುಭಸಂಬಂಧಯೋಗವು ಯಾವ ಭಾವೇಶನ ಮೇಲೆ ಇರುವದೊ ಆ ಭಾವದ ಪ್ರಕಾರ ಧನಲಾಭವಾಗುತ್ತದೆ.

# ಲಾಟರೀ, ಸಟ್ಟಾ, ರೇಸ, ಭೂಗತ ಇತ್ಯಾದಿ ಯೋಗಕಾರಕ ಗ್ರಹಗಳು

**ಲಾಟರೀ—ಸಟ್ಟಾಯೋಗ :**

ಲಾಟರಿ, ಸಟ್ಟಾ ಈ ಸ್ವರೂಪದ ಧನಲಾಭವನ್ನು ಹೊಂದುವದು ಅಂದರೆ ಅನಿಯಮಿತ, ಅಕಲ್ಪಿತ, ಅನಿಶ್ಚಿತ ರೀತಿಯಿಂದ ಧನಯೋಗ ಪ್ರಾಪ್ತಿಯಾದಂತೆ. ಸಟ್ಟಾ ಲಾಟರಿಯಿಂದ ಧನಯೋಗ ಹೊಂದಲು ಕೆಳಗೆ ಕಾಣಿಸಿದ ಐದು ಸಂಗತಿಗಳು ಅವಶ್ಯ ಇರಬೇಕು.

೧) ಜಾತಕ ಯೋಗ್ಯತೆ, ೨) ಬಲಾಢ್ಯ ಧನಯೋಗ ೩) ಆಕಸ್ಮಿಕ ಧನಯೋಗ ೪) ಆಕಸ್ಮಿಕ ಧನಯೋಗಕಾರಕ ಗ್ರಹಗಳ ಬಲಾಬಲ. ೫) ಅನುಕೂಲ ಕಾಲ,

ಈ ಸ್ವರೂಪದ ಯಾವುದೇ ವ್ಯವಹಾರಕ್ಕೆ ಜಾತಕನಿಗೆ ಪ್ರವೃತ್ತಿಯನ್ನು ಹುಟ್ಟಿಸುವ ಮತ್ತು ಆ ಪ್ರವೃತ್ತಿಯಿಂದಲೇ ಆಕಸ್ಮಿಕ ಧನಲಾಭವನ್ನು ಕೊಡುವ ಗ್ರಹಗಳೆಂದರೆ ಮಂಗಳ, ಶಂಕ್ರ, ರವಿ, ಬುಧ, ಯಾರ ಕುಂಡಲಿಯಲ್ಲಿ ಕುಜನು ಬಲಿಷ್ಟನಿರುವನೋ ಇಂಥ ಕಾರ್ಯಕ್ಕೆ ಅಂದರೆ ಸಾರಾಸಾರ ವಿಚಾರ ಮಾಡದೆ ಕೆಲಸಕ್ಕೆ ಪ್ರವೃತ್ತನಾಗುವದು ಅಥವಾ ಸಾಹಸದ ಕಡೆಗೆ ಓಡುತ್ತಿರುವುದಕ್ಕೆ ಅಂಗಾರಕನೇ ಮೂಲ ಹಾಗೂ ಮುಖ್ಯನಿರುವನು.

ಸಟ್ಟಾ, ಲಾಟರಿ ಧನಕಾರಕ ಗ್ರಹವಾದ ಮಂಗಳನು (ಕುಜನು) ಜಾತಕದಲ್ಲ ಬಲಾಢ್ಯನಿರಬೇಕು. ವೃಶ್ಚಿಕ ರಾಶಿಯು ಬಲವತ್ತರ ಇರಬೇಕು, ಇದರ ಜೊತೆಗೆ ಅಷ್ಟಮಾಧೀಶನು ಬಲಾಢ್ಯನಿದ್ದು, ಅಷ್ಟಮ ಸ್ಥಾನದಲ್ಲಿದ್ದ ಗ್ರಹವೂ ಬಲವತ್ತರ ಇರಬೇಕು, ಹಾಗೂ ರಾಹು ಗ್ರಹವು ಬಲಾಢ್ಯವಿರಬೇಕು.

ಯೋಗ ದೃಷ್ಟಿಯಿಂದ ನೋಡಲಾಗಿ ಚಂದ್ರ-ರವಿ, ಚಂದ್ರ-ಬುಧ, ಚಂದ್ರ-ಶುಕ್ರ, ರವಿ-ಶುಕ್ರ, ರವಿ-ಬುಧ, ರವಿ-ಮಂಗಳ, ಬುಧ-ಮಂಗಳ, ಶುಕ್ರ-ಮಂಗಳ, ಚಂದ್ರ-ಶುಕ್ರ, ಈ ಗ್ರಹಗಳ ಯೋಗವನ್ನು ನಾವು ಕಾಣುತ್ತೇವೆ.

ಸ್ಥಾನ ದೃಷ್ಟಿಯಿಂದ ನೋಡಿದರೆ ಅಷ್ಟಮಸ್ಥಾನದ ಸಂತರ, ಪಂಚಮಸ್ಥಾನ, ಭಾಗ್ಯಸ್ಥಾನ, ಲಾಭಸ್ಥಾನ, ಧನಸ್ಥಾನ ಈ ಸ್ಥಾನಾಧಿಪತ್ಯ ಶುಭ ಸಂಬಂಧವಿರಬೇಕು. ವಿಶೇಷವಾಗಿ ಅಷ್ಟಮಾಧೀಶನ ಶುಭ ಸಂಬಂದವು ಧನೇಶ ಲಾಬೇಶ, ಭಾಗ್ಯೇಶ, ಪಂಚಮೇಶ, ಇವರೊಂದಿಗೆ ಇರಬೇಕು.

## ಕೆಳಗೆ ಕಾಣಿಸಿದ ಯೋಗಗಳಿದ್ದರೆ ಸಟ್ಟಾ-ಲಾಟರಿಯಿಂದ ಲಾಭವಾಗುತ್ತದೆ

೧) ಅಷ್ಟಮೇಶನು ಬಲಂತನಿದ್ದು, ಅಷ್ಟಮ ಸ್ಥಾನದಲ್ಲಿದ್ದ ಗ್ರಹವು ಉಚ್ಚವಿದ್ದರೆ ೨) ಅಷ್ಟಮಾಧೀಶನು ಅಷ್ಟಮದಲ್ಲಿದ್ದರೆ ೩) ಅಷ್ಟಮಾಧೀಶನ ಶುಭಸಂಬಂಧವು ಬಲಾಢ್ಯನಿದ್ದ ಕುಜನೊಂದಿಗೆ ಇದ್ದರೆ ೪) ಬಲಾಢ್ಯ ಕುಜನಾಗಲೀ ರಾಹುವಾಗಲೀ ಅಷ್ಟಮದಲ್ಲಿದ್ದರೆ ೫) ಮೇಷ, ಕರ್ಕ, ಸಿಂಹ, ಕನ್ಯಾ ವೃಶ್ಚಿಕ ಈ ಲಗ್ನಗಳಿದ್ದು, ಮಂಗಳನು ಬಲಾಢ್ಯನಿದ್ದರೆ ವಿಶೇಷವಾಗಿ ಮೇಷ ಕನ್ಯಾ ಲಗ್ನಗಳಿಗೆ ಅಷ್ಟಮೇಶನು ಸ್ವಗೃಹ, ಮೂಲ ತ್ರಿಕೋಣ, ಉಚ್ಚನಿದ್ದರೆ ೬) ಅಷ್ಟಮೇಶ ಧನೇಶರ ಅನ್ಯೋನ್ಯ ಯೋಗವಿದ್ದರೆ ಅಥವಾ ಶುಭಸಂಬಂಧಯೋಗವಿದ್ದರೆ ಅಥವಾ ದೃಷ್ಟಿ ಇಲ್ಲವೇ ಯುತಿ ಇದ್ದರೆ, ೭) ಅಷ್ಟಮೇಶ ಲಾಭೇಶರ ಅನ್ಯೋನ್ಯ ಯೋಗ ಅಥವಾ ಅಷ್ಟಮೇಶ ಲಾಭೇಶರ ಯುತಿ ಲಾಭದಲ್ಲಿ ಇಲ್ಲವೇ ಅಷ್ಟಮದಲ್ಲಿ ಅಥವಾ ಅಷ್ಟಮೇಶ ಲಾಭೇಶರ ಶುಭಸಂಬಂಧಯೋಗ, ೮) ಅಷ್ಟಮೇಶ ಭಾಗ್ಯೇಶರ ಅನ್ಯೋನ್ಯ ಯೋಗ ಇಲ್ಲವೆ ಯುತಿ ಅಷ್ಟಮ ಇಲ್ಲವೇ ಭಾಗ್ಯದಲ್ಲಿ ಅಥವಾ ಶುಭಸಂಬಂಧ ಯೋಗ ೯) ಅಷ್ಟಮೇಶ ಪಂಚಮೇಶರ ಅನ್ಯೋನ್ಯ ಯೋಗ ಅಥವಾ ಯುತಿ, ಅಷ್ಟಮ ಇಲ್ಲವೇ ಪಂಚಮದಲ್ಲಿ, ಅಥವಾ ಶುಭಸಂಬಂಧಯೋಗ ಇದ್ದರೆ ೧೦) ಅಷ್ಟಮೇಶನೊಂದಿಗೆ ರಾಜಯೋಗಕಾರಕ ಗ್ರಹಗಳ ಶುಭ

ಸಂಬಂಧಯೋಗ, ೧೧) ಮಿಥುನ ರಾಶಿಯು ಅಷ್ಟಮದಲ್ಲಿ ಬುಧ, ರಾಹು ಇದ್ದು ಲಗ್ನದಲ್ಲಿ ಮಂಗಳನಿದ್ದರೆ ೧೨) ಕನ್ಯಾರಾಶಿಯು ಅಷ್ಟಮದಲ್ಲಿದ್ದು, ಅಷ್ಟಮದಲ್ಲಿ ರಾಹು-ಬುಧ ಇಲ್ಲವೇ ಮಂಗಳ ಬುಧ ಯೋಗವಿದ್ದರೆ (೧೩) ತುಲಾರಾಶಿಯು ಅಷ್ಟಮದಲ್ಲಿದ್ದು, ಶುಕ್ರ-ಶನಿಯರ ಯೋಗವಿದ್ದರೆ ೧೪) ಲಗ್ನದಲ್ಲಿ ಶುಭಗ್ರಹವಿದ್ದು, ದ್ವಿತೀಯ ಸ್ಥಾನದಲ್ಲಿ ಸ್ಥಿರಗ್ರಹವೂ ದ್ವಾದಶದಲ್ಲಿ ಚರಗ್ರಹವೂ ಇದ್ದರೆ.

**ರೇಸ ಯೋಗ :**

ಸಟ್ಟಾ ಲಾಟರಿಯಿಂದ ಹೇಗೆ ಅನಿಯಮಿತ, ಅನಿಶ್ಚಿತ, ಅಕಲ್ಪಿತ ರೀತಿಯಿಂದ ಆಕಸ್ಮಿಕ ಧನಪ್ರಾಪ್ತಿ ಆಗುತ್ತದೆಯೋ ಹಾಗೆ ರೇಸಿನಿಂದ ಕೂಡ ಆಗುತ್ತದೆ. ರೇಸಿನಿಂದ ಧನಪ್ರಾಪ್ತಿ ಇದೆಯೋ ಇಲ್ಲವೋ ಎಂದರಿಯಲು ಜಾತಕದ ನಾಲ್ಕೈದು ಸಂಗತಿಗಳನ್ನು ಮುಖ್ಯವಾಗಿ ಅರಿಯಬೇಕು. ೧) ಜಾತಕದ ಯೋಗ್ಯತೆ ೨) ಬಲಾಢ್ಯ ಧನಯೋಗ ೩) ಆಕಸ್ಮಿಕ ಧನಯೋಗ ಹಾಗೂ ಆಕಸ್ಮಿಕ ಧನಯೋಗಕಾರಕ ಗ್ರಹಗಳ ಬಲಾಬಲ ೪) ಅನುಕೂಲ ಕಾಲ.

ರೇಸಿನಿಂದ ಆಕಸ್ಮಿಕವಾಗಿ ಧನಲಾಭವನ್ನು ಕೊಡುವ ಗ್ರಹಗಳೆಂದರೆ ರವಿ, ಚಂದ್ರ, ಶುಕ್ರ, ಮಂಗಳ ಅದರಲ್ಲೂ ವಿಶೇಷವಾಗಿ ರೇಸು ಧನಕಾರಕ ಗ್ರಹ ಅಂದರೆ ರವಿಯು ಆದುದರಿಂದ ರವಿಯು ಹಾಗೂ ಸಿಂಹ ರಾಶಿಯು ಬಲಾಬಲವನ್ನು ನೋಡಬೇಕು.

ಯೋಗ ದೃಷ್ಟಿಯಿಂದ ವಿಚಾರಿಸಿದರೆ ಚಂದ್ರ-ರವಿ, ರವಿ-ಮಂಗಳ, ರವಿ-ಶುಕ್ರ, ಚಂದ್ರ-ಶುಕ್ರ, ಚಂದ್ರ-ಮಂಗಳ, ಶುಕ್ರ-ಮಂಗಳ ಈ ಗ್ರಹಗಳ ಯೋಗವನ್ನು ನಾವು ಕಾಣುತ್ತೇವೆ.

ಸ್ಥಾನದ ದೃಷ್ಟಿಯಿಂದ ವಿಚಾರಿಸಿದರೆ ಪಂಚಮಸ್ಥಾನ ನಂತರ ಅಷ್ಟಮ ಸ್ಥಾನ, ತದನಂತರ ಭಾಗ್ಯ, ಲಾಭ ಧನ ಈ ಸ್ಥಾನಗಳನ್ನು ಹಾಗೂ ಈ ಸ್ಥಾನಾಧೀಶರ ಶುಭ ಸಂಬಂಧವನ್ನು ನೋಡಬೇಕು.

ರಾಶಿ ದೃಷ್ಟಿಯಿಂದ ನೋಡಿದರೆ ಮೇಷ, ಸಿಂಹ, ಧನು ಈ ರಾಶಿಗಳು ರೇಸಯೋಗಕ್ಕೆ ಅನುಕೂಲ ರಾಶಿಗಳು ಇರುತ್ತವೆ. ಮೇಷ, ಸಿಂಹ, ಧನು ಈ ರಾಶಿಗಳು ಬಲಾಢ್ಯವಿದ್ದು, ರವಿ, ಮಂಗಳ, ಗುರು, ಈ ಗ್ರಹಗಳ ಶುಭ ಸಂಬಂಧವಿದ್ದರೆ ರೇಸಿನಿಂದ ಉತ್ತಮ ಲಾಭವಾಗುತ್ತದೆ.

**ಕೆಳಗೆ ಕಾಣಿಸಿದ ಯೋಗಗಳಿದ್ದರೆ ರೇಸಿನಿಂದ ಧನಲಾಭವಾಗುತ್ತದೆ.**

೧) ಬಲಾಢ್ಯ ರವಿ, ತೃತೀಯ, ಪಂಚಮ, ಷಷ್ಠ, ಅಷ್ಟಮ, ಲಾಭ ಈ ಸ್ಥಾನಗಳಲ್ಲಿದ್ದರೆ ೨) ಪಂಚಮಾಧೀಶನು ಬಲಾಢ್ಯನಾಗಿ ಪಂಚಮ, ಅಷ್ಟಮ ಲಾಭದಲ್ಲಿದ್ದರೆ ೩) ಪಂಚಮೇಶ, ಅಷ್ಟಮೇಶರ ಅನ್ಯೋನ್ಯಯೋಗ ಅಥವಾ ಯುತಿ ಪಂಚಮ ಇಲ್ಲವೇ ಅಷ್ಟಮ ಸ್ಥಾನದಲ್ಲಿ ಅಥವಾ ಶುಭ ಸಂಬಂಧಯೋಗ ಇದ್ದರೆ ೪) ಮೇಷ, ಸಿಂಹ, ಧನು ಈ ಲಗ್ನಗಳಿದ್ದು, ರವಿಯು, ಲಗ್ನ ಪಂಚಮ, ನವಮ ಈ ಯಾವುದಾದರೊಂದು ಸ್ಥಾನದಲ್ಲಿದ್ದು ಆ ಸ್ಥಾನಾಧೀಶರು ಬಲಾಢ್ಯರಿದ್ದರೆ ೫) ಪಂಚಮೇಶ, ಭಾಗ್ಯೇಶರ ಅನ್ಯೋನ್ಯ ಯೋಗ ಅಥವಾ ಯುತಿ ಪಂಚಮ ಇಲ್ಲವೇ ಭಾಗ್ಯದಲ್ಲಿ ಅಥವಾ ಶುಭಸಂಬಂಧ ಯೋಗ ವಿದ್ದರೆ ೬) ಪಂಚಮೇಶ ಲಾಭೇಶರ ಅನ್ಯೋನ್ಯ ಯೋಗ ಅಥವಾ ಯುತಿ ಪಂಚಮ ಇಲ್ಲವೇ ಲಾಭದಲ್ಲಿ ಅಥವಾ ಶುಭಸಂಬಂಧ ಯೋಗವಿದ್ದರೆ ೭) ಪಂಚಮೇಶ, ದಶಮೇಶರ ಅನ್ಯೋನ್ಯ ಯೋಗ ಅಥವಾ ಯುತಿ ಪಂಚಮ ಇಲ್ಲವೇ ದಶಮದಲ್ಲಿ ಅಥವಾ ಶುಭಸಂಬಂಧ ಯೋಗವಿದ್ದರೆ ೮) ಇದರಂತೆ ಅಷ್ಟಮೇಶನ ಅನ್ಯೋನ್ಯಯೋಗ ಯುತಿ ಅಥವಾ ಶುಭಸಂಬಂಧಯೋಗವು ಪಂಚಮೇಶ, ಲಾಭೇಶ, ದಶಮೇಶ ಧನೇಶ ಸುಖೇಶ, ಇವರೊಡನೆ ಇದ್ದರೆ ೯) ಧನು ರಾಶಿಯು ಪಂಚಮ ಇಲ್ಲವೇ ನವಮದಲ್ಲಿದ್ದು ಗುರು ಹಾಗೂ ಮಂಗಳರು ಪಂಚಮ ಇಲ್ಲವೇ ನವಮದಲ್ಲಿ ಅಥವಾ ಗುರು ಮಂಗಳರ ಶುಭ ಸಂಬಂಧ ಯೋಗವಿದ್ದರೆ ೧೦) ತುಲಾ ರಾಶಿಯು ಶುಕ್ರ–ಚಂದ್ರರ ಯುತಿಯು ಸಪ್ತಮದಲ್ಲಿದ್ದು, ಪಂಚಮದಲ್ಲಿ ರವಿಯೂ ಅಷ್ಟಮದಲ್ಲಿ ಕುಜನೂ ಇದ್ದರೆ ೧೧) ಮಿಥುನದ ಶುಕ್ರನು ಲಗ್ನದಲ್ಲಿ ಇಲ್ಲವೇ ಕನ್ಯಾ ರಾಶಿಯ ಬುಧನು ಚತುರ್ಥದಲ್ಲಿದ್ದು, ಅಷ್ಟಮದಲ್ಲಿ ಕುಜನಿದ್ದರೆ ೧೨) ಬಲಾಢ್ಯ ಚಂದ್ರ–ಶುಕ್ರರ ಯೋಗಕೇಂದ್ರ ತ್ರಿಕೋಣದಲ್ಲಿದ್ದರೆ

## • ಭೂಗತ ದ್ರವ್ಯಯೋಗ

ಸಟ್ಟಾ, ಲಾಟರಿ, ರೇಸುಗಳಿಗಿಂತ ಹೆಚ್ಚು ಅಕಲ್ಪಿತ ಅನಿಶ್ಚಿತ ಅನಿ-ವಿಂತ ಭೂಗತ ಧನಯೋಗವಿರುತ್ತದೆ. ಇದು ಎಲ್ಲರಿಗೂ ದೊರೆಯದು. ಈ ಯೋಗದಿಂದ ಧನಲಾಭ ಹೊಂದಲು ಪ್ರಾಮುಖ್ಯವಾಗಿ ಐದು ಸಂಗತಿಗಳನ್ನು ಲಕ್ಷದಲ್ಲಿಡಬೇಕು; ೧) ಕುಂಡಲಿಯ ಯೋಗ್ಯತೆ ೨) ಬಲಾಢ್ಯ ಧನಯೋಗ ೩) ಆಕಸ್ಮಿಕ ಧನಯೋಗ ೪) ಆಕಸ್ಮಿಕ ಧನಯೋಗಕಾರಕ ಗ್ರಹಗಳ ಬಲಾಬಲ. ೫) ಅನುಕೂಲ ಕಾಲ.

ಭೂಗತದಿಂದ ಧನಪ್ರಾಪ್ತಿಯಾಗಬೇಕಾದರೆ ಚಂದ್ರ, ಮಂಗಳ, ಬುಧ ಶುಕ್ರ ಚತುರ್ಥೇಶ ವಿಶೇಷವಾಗಿ ಚಂದ್ರ, ಮಂಗಳರ ಬಲಾಬಲವನ್ನು ನೋಡಬೇಕಾಗುತ್ತದೆ. ಸ್ಥಾನದ ದೃಷ್ಟಿಯಿಂದ ನೋಡಿದರೆ ಚತುರ್ಥ ಸ್ಥಾನವು ಮೂಲ ಹಾಗೂ ಮುಖ್ಯವಿರುತ್ತದೆ. ನಂತರ ಅಷ್ಟಮ, ಪಂಚಮ, ಭಾಗ್ಯ ಲಾಭ ಈ ಸ್ಥಾನಗಳನ್ನು ಪರಿಶೀಲಿಸಬೇಕು.

ಯೋಗ ದೃಷ್ಟಿಯಿಂದ ವಿಚಾರಿಸಿದರೆ ಚಂದ್ರ–ಶುಕ್ರ, ಚಂದ್ರ–ಮಂಗಳ ಚಂದ್ರ–ಬುಧ. ಬುಧ–ಮಂಗಳ. ಬುಧ–ಶುಕ್ರ, ಶುಕ್ರ–ಮಂಗಳ, ಈ ಗ್ರಹಗಳ ಯೋಗವನ್ನು ನಾವು ಕಾಣುತ್ತೇವೆ.

ರಾಶಿ ದೃಷ್ಟಿಯಿಂದ ನೋಡಿದರೆ ಕರ್ಕ ರಾಶಿ ಹಾಗೂ ಭೂರಾಶಿಗಳಾದ ವೃಷಭ, ಕನ್ಯಾ, ಮಕರ ಈ ರಾಶಿಗಳು ಪೋಷಕ ರಾಶಿಗಳಾಗಿರುತ್ತವೆ.

ಈ ಕೆಳಗೆ ಕಾಣಿಸಿದ ಯೋಗಗಳಿದ್ದರೆ ಭೂಗತ ದ್ರವ್ಯ ಪ್ರಾಪ್ತವಾಗುತ್ತದೆ.

೧) ಚತುರ್ಥೇಶನು ಬಲಾಢ್ಯನಿದ್ದರೆ ೨) ಚತುರ್ಥೇಶನು ಚತುರ್ಥದಲ್ಲಿದ್ದರೆ ೩) ಉಚ್ಚ ರಾಶಿಯ ಗ್ರಹವು ಚತುರ್ಥದಲ್ಲಿದ್ದು ಚತುರ್ಥೇಶನು ಬಲಾಢ್ಯನಿದ್ದರೆ ೪) ಮಿಥುನ ರಾಶಿಯು ಇಲ್ಲವೆ ಕನ್ಯಾ ರಾಶಿಯು ಚತುರ್ಥದಲ್ಲಿ ಬುಧ, ರಾಹು ಇದ್ದರೆ ೫) ಕರ್ಕ ರಾಶಿಯು ಗುರು–ಚಂದ್ರರ ಯುತಿ ಚತುರ್ಥ ಇಲ್ಲವೇ ಭಾಗ್ಯದಲ್ಲಿದ್ದರೆ ೬) ಚತುರ್ಥೇಶ ಭಾಗ್ಯೇಶರ ಅನ್ಯೋನ್ಯ ಯೋಗ ಅಥವಾ ಯುತಿ ಚತುರ್ಥ ಇಲ್ಲವೇ ಭಾಗ್ಯದಲ್ಲಿ ಅಥವಾ ಶುಭಸಂಬಂಧ ಯೋಗವಿದ್ದರೆ ೭) ಚತುರ್ಥೇಶ ಅಷ್ಟಮೇಶರ ಅನ್ಯೋನ್ಯಯೋಗ ಅಥವಾ

ಯುತಿ ಚತುರ್ಥ ಇಲ್ಲವೆ ಅಷ್ಟಮದಲ್ಲಿ ಅಥವಾ ಶುಭಸಂಬಂಧಯೋಗವಿದ್ದರೆ ೮) ಚಂದ್ರ ಇಲ್ಲವೆ ಶುಕ್ರ ಅಥವಾ ಚಂದ್ರ–ಶುಕ್ರರು ಬಲಾಢ್ಯರಾಗಿ ಚತುರ್ಥದಲ್ಲಿದ್ದರೆ ಅಥವಾ ಯೋಗಕಾರಕರಾಗಿ ಚತುರ್ಥದಲ್ಲಿದ್ದರೆ ೯) ಚತುರ್ಥೇಶ ಲಾಭೇಶರ ಅನ್ಯೋನ್ಯಯೋಗ ಅಥವಾ ಯುತಿ ಚತುರ್ಥ ಇಲ್ಲವೆ ಲಾಭದಲ್ಲಿ ಅಥವಾ ಶುಭಸಂಬಂಧವಿದ್ದರೆ ೧೦) ಚತುರ್ಥೇಶ–ಧನೇಶ, ಚತುರ್ಥೇಶ–ಪಂಚಮೇಶ, ಚತುರ್ಥೇಶ ದಶಮೇಶ, ಇವರ ಅನ್ಯೋನ್ಯಯೋಗ ಯುತಿ ಅಥವಾ ಶುಭಸಂಬಂಧ ಯೋಗವಿದ್ದರೆ.

### ಸರ್ಕಾರದಿಂದ ಬರುವ ಪಾರಿತೋಷಕ, ಬಹುಮಾನ

### ಪ್ರಾಯಿಜ ಬಾಂಡ ಮೊದಲಾದವುಗಳು

ಸರ್ಕಾರದಿಂದ ಬಹುಮಾನ ಹೊಂದುವ ಅನೇಕ ಪ್ರಕಾರಗಳಿವೆ. ಅವುಗಳಲ್ಲಿ ಪ್ರಾಯಿಜ ಬಾಂಡ ಒಂದು. ಸರ್ಕಾರದಿಂದ ಬಹುಮಾನ ಹೊಂದಬೇಕಾದರೆ ಅಥವಾ ಸರ್ಕಾರದಿಂದ ಬಹುಮಾನ ಹೊಂದಲು ಜಾತಕದಲ್ಲಿ ಮುಖ್ಯವಾಗಿ ಆರು ಸಂಗತಿಗಳನ್ನು ನೋಡಬೇಕಾಗುತ್ತದೆ.

೧) ಜಾತಕದ ಯೋಗ್ಯತೆ ೨) ಬಲಾಢ್ಯ ಧನಯೋಗ ೩) ಆಕಸ್ಮಿಕ ಧನಯೋಗಕಾರಕ ೪) ಗ್ರಹಗಳ ಬಲಾಬಲ ೫) ರಾಜಗ್ರಹಗಳಾದ ರವಿ, ಚಂದ್ರ, ಗುರು, ಶುಕ್ರ ಇವರ ಬಲಾಬಲ ೬) ಅನುಕೂಲಕಾಲ.

ಸರ್ಕಾರದಿಂದ ಧನವನ್ನು ಕೊಡುವ ಗ್ರಹಗಳೆಂದರೆ ರವಿ, ಚಂದ್ರ, ಗುರು, ಶುಕ್ರ ಇವರು ಜಾತಕದಲ್ಲಿ ಬಲಾಢ್ಯರಿರಬೇಕು. ಹಾಗೂ ಸಿಂಹ, ಕರ್ಕ ಧನು, ಮೀನ, ವೃಷಭ, ತುಲಾ. ಈ ರಾಶಿಗಳು ರಾಜಯೋಗಕಾರಕ ರಾಶಿಗಳು. ವಿಶೇಷವಾಗಿ ಸಿಂಹ ರಾಶಿಯು ರಾಜಾಶ್ರಯ ರಾಶಿ ಇರುತ್ತದೆ.

ಯೋಗ ದೃಷ್ಟಿಯಿಂದ ನೋಡಲಾಗಿ ಚಂದ್ರ–ರವಿ, ಗುರು–ಚಂದ್ರ, ಶುಕ್ರ–ಚಂದ್ರ, ಗುರು–ಶುಕ್ರ, ರವಿ–ಗುರು, ರವಿ–ಶುಕ್ರ ಈ ಗ್ರಹಗಳ ಶುಭ ಯೋಗವು ಭಾಗ್ಯ, ಚತುರ್ಥ, ಪಂಚಮ, ಲಾಭ, ಧನಸ್ಥಾನದಲ್ಲಿರಬೇಕು.

ಸರ್ಕಾರದಿಂದ ಧನವನ್ನು ಹೊಂದಲು ಸ್ಥಾನ ದೃಷ್ಟಿಯಿಂದ ಪಂಚಮ, ನವಮ, ದಶಮ, ಲಾಭ, ಸುಖ, ಧನ, ಈ ಸ್ಥಾನಗಳು ಬಲಾಢ್ಯರಿರಬೇಕು. ಹಾಗೂ ಈ ಸ್ಥಾನಾಧಿಪತ್ಯದ ಶುಭ ಸಂಬಂಧವು ಪಂಚಮೇಶ ಹಾಗೂ ಭಾಗ್ಯೇಶರೊಂದಿಗೆ ಇರಬೇಕು.

**ಈ ಕೆಳಗೆ ಕಾಣಿಸಿದ ಯೋಗಗಳಿದ್ದರೆ ಪ್ರಾಯಿಜಬಾಂಡ ಅಥವಾ ಸರ್ಕಾರ ಬಹುಮಾನ ಸಿಗುತ್ತದೆ.**

೧) ಭಾಗ್ಯೇಶ, ದಶಮೇಶರ ಅನ್ಯೋನ್ಯಯೋಗ ಅಥವಾ ಯುತಿ ಭಾಗ್ಯ ಇಲ್ಲವೆ ದಶಮದಲ್ಲಿ ಅಥವಾ ಶುಭ ಸಂಬಂಧಯೋಗ. ೨) ಭಾಗ್ಯೇಶ ಲಾಭೇಶರ ಅನ್ಯೋನ್ಯಯೋಗ ಅಥವಾ ಯುತಿ ಲಾಭ ಇಲ್ಲವೆ ಭಾಗ್ಯದಲ್ಲಿ ಅಥವಾ ಶುಭ ಸಂಬಂಧಯೋಗ ೩) ಪಂಚಮೇಶ ಭಾಗ್ಯೇಶರ ಅನ್ಯೋನ್ಯ ಯೋಗ ಅಥವಾ ಯುತಿ ಇಲ್ಲವೆ ಪಂಚಮ ಇಲ್ಲವೆ ಭಾಗ್ಯದಲ್ಲಿ ಅಥವಾ ಶುಭ ಸಂಬಂಧಯೋಗ ೪) ಪಂಚಮೇಶ, ದಶಮೇಶರ ಅನ್ಯೋನ್ಯಯೋಗ ಅಥವಾ ಯುತಿ ಪಂಚಮ ಇಲ್ಲವೆ ದಶಮದಲ್ಲಿ ಅಥವಾ ಶುಭ ಸಂಬಂಧಯೋಗ ೫) ಭಾಗ್ಯೇಶ ಸುಖೇಶರ ಅನ್ಯೋನ್ಯಯೋಗ ಅಥವಾ ಯುತಿ ಭಾಗ್ಯ ಇಲ್ಲವೆ ಸುಖದಲ್ಲಿ ಅಥವಾ ಶುಭ ಸಂಬಂಧಯೋಗ ೬) ದಶಮೇಶ ಧನೇಶರ ಅನ್ಯೋನ್ಯ ಯೋಗ ಅಥವಾ ಯುತಿ ಧನ ಇಲ್ಲವೆ ದಶಮದಲ್ಲಿ ಅಥವಾ ಶುಭ ಸಂಬಂಧಯೋಗ ೭) ದಶಮೇಶ ಲಾಭೇಶರ ಅನ್ಯೋನ್ಯಯೋಗ ಅಥವಾ ಯುತಿ ದಶಮ ಇಲ್ಲವೆ ಲಾಭದಲ್ಲಿ ಅಥವಾ ಶುಭ ಸಂಬಂಧಯೋಗ ೮) ಸುಖೇಶ, ಲಾಭೇಶರ ಅನ್ಯೋನ್ಯಯೋಗ ಅಥವಾ ಯುತಿ ಸುಖ ಇಲ್ಲವೆ ಲಾಭ ದಲ್ಲಿ ಅಥವಾ ಶುಭ ಸಂಬಂಧ ಯೋಗ ೯) ಭಾಗ್ಯೇಶ ಧನೇಶರ ಅನ್ಯೋನ್ಯ ಯೋಗ ಅಥವಾ ಯುತಿ ಭಾಗ್ಯ ಇಲ್ಲವೆ ಧನದಲ್ಲಿ ಅಥವಾ ಶುಭ ಸಂಬಂಧ ಯೋಗ ೧೦) ಲಗ್ನೇಶನ ಶುಭ ಸಂಬಂಧಯೋಗ, ಯುತಿ ಇಲ್ಲವೆ ಅನ್ಯೋನ್ಯ ಯೋಗ, ಭಾಗ್ಯೇಶ, ದಶಮೇಶ, ಲಾಭೇಶ, ಸುಖೇಶ, ಪಂಚಮೇಶರೊಂದಿಗೆ ಇದ್ದರೆ.

ಹೀಗೆ ಲಗ್ನೇಶ, ಲಾಭೇಶ, ಧನೇಶ, ಸುಖೇಶ, ಪಂಚಮೇಶ, ದಶಮೇಶ ಭಾಗ್ಯೇಶ ಇವರ ಶುಭ ಸಂಬಂಧ ಯೋಗವಾಗಲಿ ಯುತಿಯಾಗಲಿ

ಅನ್ಯೋನ್ಯ ಯೋಗವಾಗಲಿ ಅಥವಾ ರಾಜಯೋಗವಾಗಲಿ ಸರ್ಕಾರದಿಂದ ಬಹುಮಾನ ಸಿಗುತ್ತವೆ.

ಸರ್ಕಾರದಿಂದ ಬಹುಮಾನ ಹೊಂದುವ ಮತ್ತೆ ಕೆಲವು ಯೋಗಗಳನ್ನು ಕೆಳಗೆ ಕೊಡಲಾಗಿದೆ.

೧) ಮೇಷ, ಸಿಂಹ, ಧನು, ಈ ಲಗ್ನಗಳಿದ್ದು, ರವಿ ಆಗಲಿ ಗುರು ಆಗಲೀ ಲಗ್ನ, ಪಂಚಮ, ಭಾಗ್ಯದಲ್ಲಿದ್ದರೆ, ಅಥವಾ ಅವರ ನವಪಂಚಕ ವಿದ್ದರೆ

(೨) ಮೇಷ ಲಗ್ನದ ಲಗ್ನದಲ್ಲಿ ರವಿ ಹಾಗೂ ಚತುರ್ಥದಲ್ಲಿ ಚಂದ್ರ ನಿದ್ದರೆ

(೩) ಮೇಷ ಇಲ್ಲವೇ ಸಿಂಹ ಲಗ್ನವಿದ್ದು, ರವಿ ಪಂಚಮ ಇಲ್ಲವೇ ಭಾಗ್ಯದಲ್ಲಿ ಗುರು ಇದ್ದರೆ

(೪) ಧನು ಲಗ್ನದ ಭಾಗ್ಯದಲ್ಲಿ ರವಿಯೂ ಲಾಭದಲ್ಲಿ ಶುಕ್ರನೂ ಲಗ್ನದಲ್ಲಿ ಗುರುವೂ ಇದ್ದರೆ

(೫) ಮಿಥುನ ಲಗ್ನದ ಪಂಚಮದಲ್ಲಿ ಶುಕ್ರನೂ ಭಾಗ್ಯದಲ್ಲಿ ಶನಿಯೂ ಇದ್ದರೆ

(೬) ವೃಶ್ಚಿಕ ಲಗ್ನದ ದಶಮದಲ್ಲಿ ರವಿ ಭಾಗ್ಯದಲ್ಲಿ ಚಂದ್ರನಿದ್ದರೆ

(೭) ವೃಶ್ಚಿಕ ಲಗ್ನದ ಭಾಗ್ಯದಲ್ಲಿ ಗುರು-ಚಂದ್ರರ ಯೋಗವಿದ್ದರೆ

(೮) ಮೀನ ಲಗ್ನದ ಪಂಚಮದಲ್ಲಿ ಗುರು-ಚಂದ್ರರ ಯೋಗವಿದ್ದರೆ

(೯) ಮೇಷ ಲಗ್ನದ ಚತುರ್ಥದಲ್ಲಿ ಚಂದ್ರ, ಭಾಗ್ಯದಲ್ಲಿ ಗುರು, ಇದ್ದರೆ

(೧೦) ಮಿಥುನ ಲಗ್ನದ ಗುರು-ಚಂದ್ರರ ಯೋಗ ಧನ, ಸಪ್ತಮ, ದಶಮದಲ್ಲಿದ್ದರೆ

(೧೧) ಕರ್ಕ ಲಗ್ನದ ಭಾಗ್ಯದಲ್ಲಿ ಚಂದ್ರ-ಶುಕ್ರರ ಯೋಗವಿದ್ದರೆ ದಶಮ ದಲ್ಲಿ ಮಂಗಳನಿದ್ದರೆ



# ಗ್ರಹಗಳ ಮೇಲಿಂದ

ಆಕಸ್ಮಿಕ ಧನಯೋಗದ ಬಗೆಗೆ ವಿಚಾರಿಸುವಾಗ ಲಗ್ನ, ರಾಶಿ, ಸ್ಥಾನ (ಭಾವ) ಗಳು ಎಷ್ಟು ಮಹತ್ವದ ವಿಷಯವೋ ಅಷ್ಟೇ ಮಹತ್ವ ಗ್ರಹಗಳಿಗೂ ಇರುತ್ತದೆ. ಭಿನ್ನ ಭಿನ್ನ ಗ್ರಹಗಳ ಗುಣಧರ್ಮ, ಕಾರಕ ಉದ್ಯೋಗ ವ್ಯವಸಾಯ ಭಿನ್ನ ಭಿನ್ನ ಇರುತ್ತದೆ. ಅಂತೆಯೇ ಭಿನ್ನ ಭಿನ್ನ ರೀತಿಯಿಂದ ಧನ ಲಾಭವನ್ನು ಕೊಡುತ್ತವೆ.

ಉದಾ :— ವೃಷಭ ಲಗ್ನದ ಎರಡು ಜಾತಕಗಳಿದ್ದು, ಮೊದಲೇ ಜಾತಕನಿಗೆ ಕನ್ಯಾರಾಶಿಯು ಬುಧನು (ಪಂಚಮ) ಇದ್ದಾನೆ. ಎರಡನೇ ಜಾತಕನಿಗೆ ಮಕರ ರಾಶಿಯು ಶನಿಯು (ನವಮ) ಇದ್ದಾನೆ ಅಂತಾ ಕಲ್ಪಿಸಿರಿ. ಇಲ್ಲಿ ಕನ್ಯಾರಾಶಿ ಬುಧನಿದ್ದವನಿಗೆ, ಪತ್ರಿಕಾ ವ್ಯವಸಾಯದಿಂದಾಗಲೀ ವಿಮಾ ಏಜೆಂಟ ಮೊದಲಾದ ಕಮೀಶನ್ ಉದ್ಯೋಗದಿಂದಾಗಲೀ ಲಾಭವಾಗುತ್ತಿದ್ದರೆ ಎರಡನೇಯವನಿಗೆ, ಜಂಗಲ ಕಂಟ್ರಾಕ್ಟ (ಫಾರೆಸ್ಟ) ಜಲಾವ ಇಮಾರತಿ ಮೊದಲಾದ ಕಟ್ಟಿಗೆ ವ್ಯಾಪಾರದಿಂದಾಗಲೀ ಬರ್ಮಾಶೆಲ್ಲ ಏಜೆಂಟ ಮುಂತಾದ ಎಣ್ಣೆ ಸಂಬಂಧದಿಂದಾಗಲೀ ಲಾಭವಾಗುತ್ತದೆ. ಆದುದರಿಂದ ಭಿನ್ನ ಭಿನ್ನ ಗ್ರಹಗಳ ಉದ್ಯೋಗ ಗುಣಧರ್ಮಕಾರಕಗಳಾವವು ? ಇದನ್ನೇ ಕೆಳಗೆ ಕೊಡಲಾಗಿದೆ.

ರವಿ :

ರಾಜಕೀಯ ಸಾಮಾಜಿಕ ಧುರೀಣತ್ವ, ಸರಕಾರದಿಂದ, ಅನೇಕ ಸಂಘ ಸಂಸ್ಥೆಗಳ ಆಡಳಿತದಿಂದ, ಅಧಿಕಾರ, ಸರಾಫ, ಬಂಗಾರ ವಸ್ತ್ರ, ಒಡವೆ, ರೇಸು ಹಿರಿಯ ಅಣ್ಣನಿಂದ, ಪಿತೃ ಹಾಗೂ ಪಿತೃವರ್ಗ ಮಂತ್ರಿ M. L. A. M. P.

ಇವರಿಂದ, ಈ ಅಧ್ಯಕ್ಷ, ಚೇರಮನ ಮೊದಲಾದ ಪದವಿಗಳಿಂದ, ಈ ಮೊದಲಾದ ಉದ್ಯೋಗದಿಂದ ಧನಲಾಭ ಆಗುತ್ತದೆ.

**ಚಂದ್ರ**

ಸರಕಾರದಿಂದ, ತಾಯಿ ಹಾಗೂ ತಾಯಿ ಬಳಗದಿಂದ, ಸ್ತ್ರೀಯರಿಂದ ಪ್ರವಾಹೀ ಪದಾರ್ಥ ಹಾಗೂ ಪ್ರವಾಹಿ ಔಷಧ, ಜನಸಮೂಹದ ಉದ್ಯೋಗ ಹೊಟೇಲ-ಖಾನಾವಳೀ, ಅನ್ನ, ಧಾನ್ಯ, ಹಡಗುಪಡೆ ಹಾಗೂ ನೀರಿಗೆ ಸಂಬಂಧಿಸಿದ ಉದ್ಯೋಗದಿಂದ ಲಂಚ ಮೊದಲಾದ ಅವ್ಯವಹಾರದಿಂದ ರೇಸು, ಭೂಗತದಿಂದ, ಜ್ಯೋತಿಷ್ಯ ಶಾಸ್ತ್ರದಿಂದ, ದೂರದ ಪ್ರವಾಹದಿಂದ, ಲಗ್ನ ಸಮಾರಂಭಾದಿಗಳಿಂದ ಈ ಮೊದಲಾದ ಉದ್ಯೋಗದಿಂದ ಧನಲಾಭವಾಗುತ್ತದೆ.

**ಮಂಗಳ**

ಸಟ್ಟಾ-ಲಾಟರೀ, ಕಂಟ್ರಾಕ್ಟ, ಭೂಗತ ಜೂಜು, ಪಂದ್ಯ, ತಾಂತ್ರಿಕ ವೈಜ್ಞಾನಿಕ ಉದ್ಯೋಗದಿಂದ. ಮಶಿನರೀಯಿಂದ, ಮಿಲಿಟರೀ, ವೈಮಾನಿಕ, ಪೋಲೀಸ, ಸರ್ಜನ, ಡಾಕ್ಟರ, ಇಂಜನೀಯರ ಯಂತ್ರಜ್ಞಾನದಲ್ಲಿ ನೈಪುಣ್ಯತೆಯಿಂದ, ಮೋನರಿ ಕಾರಖಾನೆ, ವರ್ಕ-ಶಾಪ, ಮದ್ದು-ಗುಂಡುಗಳ ಉತ್ಪನ್ನದಿಂದ ( ಘಟಾಕ್ಷಿ ವ್ಯಾಪಾರ ) ಶೆರೆ-ಸೇಂದಿ, ಅಫು-ಗಾಂಜಾ, ಮೊದಲಾದ ಮಾದಕ ಪದಾರ್ಥಗಳಿಂದ, ಬಂಧುಗಳಿಂದ ಈ ಮೊದಲಾದ ಉದ್ಯೋಗ ಹಾಗೂ ಗುಣಧರ್ಮಗಳಿಂದ ಧನಲಾಭವಾಗುತ್ತದೆ.

**ಬುಧ**

ಕಾರು-ಮೋಟರ, ಸ್ಕೂಟರ, ಸಾಯಕಲ್ಲ, ಮೊದಲಾದ ಓಡಾಡುವ ವಾಹನಗಳಿಂದ, ರೇಲ್ವೇ, ಪೋಸ್ಟ, ತಾರು ಟೆಲಿಫೋನ, ಮುದ್ರಣ, ವ್ಯವಸಾಯದಿಂದ, ಪತ್ರಿಕಾ ವ್ಯವಸಾಯ ಪುಸ್ತಕ ಪ್ರಕಾಶನ ಏಮಾ ಏಜೆಂಟ ಹಾಗೂ ಯಾವುದೇ ಕಮಿಶನ್ ಏಜೆಂಟ, ಗಾಯಿಡ-ಟೆಕ್ಸ್ಟ ಮೊದಲಾದ ಲೇಖನ ಅಥವಾ ವ್ಯಾಪಾರದಿಂದ ಸಟ್ಟಾ ಹಾಗೂ ಶೇರ ವ್ಯಾಪಾರ ಹಾಗೂ ಯಾವುದೇ

ವ್ಯಾಪಾರದಿಂದ, ಮಿತ್ರರಿಂದ, ಸ್ವತಂತ್ರ ಉದ್ಯೋಗದಿಂದ ರಾಯಭಾರೀ, ಚಳವಳೀ ಪುಢಾರಿ, ಲಂಚ ಮೊದಲಾದ ಅನೀತಿಯಿಂದ ಈ ಮೊದಲಾದ ಉದ್ಯೋಗ, ವ್ಯವಸಾಯದಿಂದ ಧನಲಾಭವಾಗುತ್ತದೆ

ಗುರು

ದತ್ತಕ-ವಾರ್ಸಾ, ಸ್ತ್ರಿಯರಿಂದ ಲೋಕವಹಾನ್ಯತ್ವ ಅನೇಕ ಸಂಘ, ಸಂಸ್ಥೆಗಳ ಅಡಳಿತಗಾರನಾಗಿ ವರಿಷ್ಠ ಹುದ್ದೆಯಿಂದ, ಮಠಾಧೀಶರಿಂದ, ವೈದ್ಯಕೀ ವೃತ್ತಿಯಿಂದ ಬಾರಿಷ್ಟರ-ನ್ಯಾಯಾಧೀಶರಿಂದ ಪ್ರೊಫೆಸರ, ಪ್ರಿನ್ಸಿಪಾಲ ಮೊದಲಾದ ಶಿಕ್ಷಣ ಖಾತೆಯಿಂದ, ಜ್ಯೋತಿಷಿ ಲೇಖಕನಾಗಿ, ಸಭಾಪತಿ, ಅಧ್ಯಕ್ಷ, ಚೇರ್‌ಮನ್‌ರಾಗಿ M. L. A, M. P. ವರ್ಗದವರಿಂದ ಬುದ್ಧಿವಂತಿಕೆ ಈ ಮೊದಲಾದ ಉದ್ಯೋಗ, ವ್ಯವಸಾಯದಿಂದ ಧನಲಾಭವಾಗುತ್ತದೆ.

ಶುಕ್ರ

ಸ್ವಸ್ತ್ರಿಯರಿಂದ, ಪರಸ್ತ್ರಿಯರಿಂದ ಕಲಾಕೌಶಲ್ಯ (Fine Art) ಸಾಹಿತ್ಯ, ಪೇಂಟಿಂಗ, ಸಂಗೀತ, ಸಿನೇಮಾ, ನಾಟಕ, ನೃತ್ಯ ಮೊದಲಾದವುಗಳಿಂದ ಬೆಲೆಯುಳ್ಳ ವಸ್ತುವಡವೆಗಳಿಂದ (ಉಲ್‌ನ-ರೇಶಿಮೆ) ಅರಿವೆಗಳಿಂದ ಸುಗಂಧ ದ್ರವ್ಯ ಹಾಗೂ ವಿಲಾಸಮಯ ವಸ್ತುಗಳಿಂದ, ಮಿಠಾಯಿ, ಬಿಸ್ಕೀಟ ಸ್ನೋ ಪಾವಡರ ಮೊದಲಾದ ಉದ್ಯೋಗ ಇಲ್ಲವೆ ಏಜನ್ಸಿಯಿಂದ, ಖಾನಾವಳೀ, ರೆಸ್ಟೋರೆಂಟ ಉದ್ಯೋಗದಿಂದ, ಸಾವಜನಿಕ ಸಂಸ್ಥೆ ( ನರ್ಸಿಂಗ ) ಪ್ರಸೂತಿ ಗೃಹ ಬಡ್ಡಿ ವ್ಯವಹಾರ, ಸರಾಫ ಸ್ವತಂತ್ರ ಉದ್ಯೋಗದಿಂದ ಈ ಮೊದಲಾದ ಉದ್ಯೋಗ ವ್ಯವಸಾಯದಿಂದ ಧನಪ್ರಾಪ್ತಿ ಆಗುತ್ತದೆ.

ಶನಿ

ವಕೀಲವೃತ್ತಿ, ಬ್ಯಾರಿಷ್ಟರ ನಾಯಾಧೀಶ ಸರಕಾರೀ ವಕೀಲ, ಸಲ್ಲಾಗಾರ ಕೃಷಿಸಂಬಂಧ ಕೂಲಿಕಾರ ಕಾರ್ಖಾನೆಕರಿಂದ, ಖಣೀ ಉದ್ಯೋಗ ಹಾಗೂ ಖಣೀಸಂಪತ್ತುಗಳಿಂದ. ಆಕಳು, ಎಮ್ಮಿ, ಕುರಿ, ಕೋಳಿ ಮೊದಲಾದ ಸಾಕುವ ಪ್ರಾಣಿಗಳಿಂದ, ಎಲ್ಲ ಪ್ರಕಾರದ ಎಣ್ಣೆಗಳಿಂದ, ಜಲಾವ-ಇವಾರತಿ

ಮೊದಲಾದ ಎಲ್ಲ ಪ್ರಕಾರದ ಕಸ್ಟಿಗೆಗಳಿಂದ, ಅಡವಿಗಳಿಂದ, ಧಾನ್ಯವ್ಯಾಪಾರ ಹೋಮಿಯೋಪತೀ ಆಯುರ್ವೇದಿಕ ಮೊದಲಾದ ವನಸ್ಪತೀ ಔಷಧಿಗಳಿಂದ ಈ ಮೊದಲಾದ ಉದ್ಯೋಗ, ವ್ಯವಸಾಯದಿಂದ ಧನಲಾಭವಾಗುತ್ತದೆ.

ರಾಹು–ಕೇತು

ಯಂತ್ರ, ಮಂತ್ರ, ಭೂತ, ಪಿಶಾಚ, ಇಂದ್ರಜಾಲ ಮೊದಲಾದ ಗಾರುಡ ವಿದ್ಯೆಗಳಿಂದ, ಪೇಂಟಿಂಗ, ಡ್ರಾಯಿಂಗ ಮದ್ಯ–ಮಾಂಸ ಮೊದಲಾದ ಮಾದಕ ಪದಾರ್ಥಗಳಿಂದ. ವನಸ್ಪತೀ ಔಷದ ಸಟ್ಟಾ–ಲಾಟರೀ. ರೇಸು ಭೂಗತ ಮೊದ ಲಾದ, ಆಕಸ್ಮಿಕ ಪಂದ್ಯ–ಹಾಗೂ ಜೂಜುಗಳಿಂದ, ಯಂತ್ರ, ಮಾಶನರೀ ಮೊದ ಲಾದ, ವೈಮಾನಿಕ ರೀತಿಯಿಂದ, ಮಿಲಿಟರೀ, ಪೋಲಿಸ, ವೈಮಾನಿಕ ಇಂಜನೀ ಯರ ಈ ಮೊದಲಾದ ಉದ್ಯೋಗ, ವ್ಯವಸಾಯಗಳಿಂದ ಧನಲಾಭ ವಾಗು ತ್ತದೆ.

## ಅಷ್ಟಮಸ್ಥಾನ

ಎಷ್ಟೋ ಜ್ಯೋತಿಷಿಗಳು ಅಷ್ಟಮಸ್ಥಾನವನ್ನು ಪೂರ್ಣವಾಗಿ ಪರಿಶೀಲಿ ಸುವದಿಲ್ಲ, ಎನ್ನುವದಕ್ಕಿಂತಲೂ ಅಲಕ್ಷ ಮಾಡುವರು ಅಂದರೆ ಹೆಚ್ಚು ಸಮಂಜ ಸವಾಗುವುದು. ಆದರೆ ಆಕಸ್ಮಿಕ ಧನಯೋಗದ ಬಗ್ಗೆ ವಿಚಾರ ಮಾಡ ಬೇಕಾ ದರೆ ಅಷ್ಟಮ ಸ್ಥಾನಕ್ಕಿರುವಷ್ಟು ಪ್ರಾಮುಖ್ಯತೆ ಬೇರಾವ ಸ್ಥಾನಕ್ಕೂ ಇರುವ ದಿಲ್ಲ ಅಂದರೆ ಅನುಚಿತವೇನೂ ಆಗಲಾರದು.

ಅಷ್ಟಮಸ್ಥಾನ ಅಂದರೆ ಜಾತಕದ ( ಕುಂಡಲೀಯ ) ೮ನೇ ಸ್ಥಾನ ಇರು ವುದು. ಈ ಸ್ಥಾನದಿಂದ ಸಟ್ಟಾ–ಲಾಟರೀ, ಗುಪ್ತಧನ, ಮೃತ್ಯುಪತ್ರ, ( ಹುಂಡಾ ), ತೆರ, ವರದಕ್ಷಿಣೆ, ವಾರ್ಸಾ, ಸ್ತ್ರೀಧನ, ಜೂಜು ಪಂದ್ಯ, ಲಂಚ, ಕಾಲಾ ಬಾಜಾರ ಮೊದಲಾದ ಆಕಲ್ಪಿತ, ಅನಿಯಮಿತ ಧನಲಾಭವನ್ನು ದರ್ಶಿ ಸುತ್ತದೆ.

ಅಷ್ಟಮಸ್ಥಾನ ಇದು ಸಪ್ತಮಸ್ಥಾನದ ದ್ವಿತೀಯ ಸ್ಥಾನ ಅಂದರೆ ಪತ್ನಿಯ ಧನಸ್ಥಾನ ಅಂತೆಯೇ ಸ್ತ್ರೀಧನ ಅರ್ಥಾತ್ ಹೆಣ್ಣು ಕೊಡುವ ಮಾವ ನಿಂದ ಬರುವ ಹಣದ ಬಗ್ಗೆ ಈ ಸ್ಥಾನದಿಂದ ವಿಚಾರಿಸಬೇಕಾಗುತ್ತದೆ ಇದಲ್ಲದೆ

ಅಷ್ಟಮಸ್ಥಾನಕ್ಕೆ ಮೃತ್ಯುಸ್ಥಾನವೆನ್ನುತ್ತಾರೆ. ಅಂತೆಯೇ ಮೃತ್ಯುವಿನಿಂದ ಅಂದರೆ ಮೃತ್ಯುಪತ್ರ (ವಾರಸಾ) ದಿಂದ ಬರುವ ಹಣವನ್ನು ಈ ಸ್ಥಾನದಿಂದಲೇ ನೋಡುತ್ತಾರೆ.

ಸ್ತ್ರೀಧನ ಅಥವಾ ವಾರ್ಸಾಧನದ ಕಾರಕನು ಅಂದರೆ ಅಷ್ಟಮೇಶನು ಮೂಲ ಹಾಗೂ ಮುಖ್ಯ ಇರುತ್ತಾನೆ. ಅಷ್ಟಮೇಶನು ಬಲಾಢ್ಯನಾಗಿ ಜಾತಕ ದಲ್ಲಿ ಇದ್ದರೆ ಸ್ತ್ರೀಧನ, ವಾರ್ಸಾ ಮೊದಲಾದವುಗಳಿಂದ ಧನಲಾಭವಾಗುತ್ತದೆ.

ಬಲಾಢ್ಯ ಗುರು, ಚಂದ್ರ, ಶುಕ್ರರು ಅಷ್ಟಮಸ್ಥಾನದಲ್ಲಿದ್ದರೆ ಅಥವಾ ಸಪ್ತಮೇಶ ಬಲಾಢ್ಯನಾಗಿ ಅಷ್ಟಮದಲ್ಲಿದ್ದರೆ, ಪತ್ನಿಯಿಂದಾಗಲೀ ಪತ್ನಿಯ ತವರುಮನೆಯಿಂದಾಗಲೀ ದ್ರವ್ಯ ಲಾಭವಾಗುತ್ತದೆ. ಅಥವಾ ವಾರ್ಸಾಧನ ಪ್ರಾಪ್ತಿ ಆಗುತ್ತದೆ.

ಬಲಾಢ್ಯ ಬುಧ-ಗುರು ಅಷ್ಟಮಸ್ಥಾನದಲ್ಲಿದ್ದರೆ, ವಾರ್ಸಾ-ಬಕ್ಷೀಸು ಮೃತ್ಯುಪತ್ರದಿಂದ ದ್ರವ್ಯ ಲಾಭವಾಗುತ್ತದೆ.

. ರಾಹು-ಮಂಗಳರು ಬಲಾಢ್ಯರಾಗಿ ಅಷ್ಟಮಸ್ಥಾನದಲ್ಲಿದ್ದರೆ ಸಟ್ಟಾ-ಲಾಟರೀ ಕಾಲಾಬಾಜಾರ, ಲಂಚ ಈ ಮೊದಲಾದವುಗಳಿಂದ ಧನಲಾಭ ವಾಗುತ್ತದೆ.

ರಾಹು, ಚಂದ್ರ, ಬುಧ, ಮಂಗಳ, ಇವರು ಬಲಾಢ್ಯರಾಗಿ ಅಷ್ಟಮದಲ್ಲಿ ದ್ದರೆ ಲಂಚದಿಂದ ಧನಲಾಭವಾಗುತ್ತದೆ.

ರವಿಯು ಅಷ್ಟಮದಲ್ಲಿದ್ದರೆ ವಾರ್ಸಾ, ಸ್ತ್ರೀಧನ ಇತ್ಯಾದಿ ಸಿಗಲಾರದು. ಆದರೆ ಅದೇ ರವಿಯು ಬಲಾಢ್ಯನಾಗಿ ಅಷ್ಟಮದಲ್ಲಿದ್ದರೆ ಪಿತೃ, ವಾರ್ಸಾ ಆಗಲೀ ರಾಜಾಶ್ರಯ, ಸರ್ಕಾರದಿಂದಾಗಲೀ ಧನಲಾಭ ಕೊಡುವನು.

ರವಿಯಂತೆ ಶನಿ ಕೂಡ ವಾರ್ಸಾ, ಸ್ತ್ರೀಧನವನ್ನು ಕೊಡಲಾರ. ಆದರೆ, ವೃಷಭ-ಮಿಥುನ, ತುಲಾ ಮಕರ ಕುಂಭದಲ್ಲಿರುವುದರಿಂದ ಕೃಷಿಯಿಂದಾಗಲೀ ನ್ಯಾಯ-ಧರ್ಮ ರೀತಿಯಿಂದಾಗಲೀ ಧನಲಾಭವನ್ನು ಕೊಡುವನು.

ಶುಕ್ರ-ಮಂಗಳರ ಶುಭಯೋಗವಾಗಲೀ ಚಂದ್ರ-ಮಂಗಳರ ಶುಭ ಯೋಗವಾಗಲೀ ಚಂದ್ರ-ಶುಕ್ರರ ಶುಭಯೋಗವಾಗಲೀ ಅಷ್ಟಮ ಸ್ಥಾನ ದಲ್ಲಿದ್ದು, ಭಾಗ್ಯೇಶ ಲಾಭೇಶರು ಬಲಾಢ್ಯರಿದ್ದರೆ ಪರಸ್ತ್ರೀಯರಿಂದಾಗಲೀ

ಚಾರ ಸ್ತ್ರೀಯರಿಂದಾಗಲೀ ನೈತಿಕ ಅಥವಾ ಅನೈತಿಕ ರೀತಿಯಿಂದ ಧನಪ್ರಾಪ್ತಿ ಆಗುತ್ತದೆ.

ಜಾತಕ (ಕುಂಡಲಿ) ದಲ್ಲಿ ಬಲಾಢ್ಯ ಅಥವಾ ಯೋಗಕಾರಕ ಯಾವ ಗ್ರಹ ಇರುವದೋ ಆ ಗ್ರಹದ ಶುಭಸಂಬಂಧವು ಅಷ್ಟಮೇಶ ಹಾಗೂ ಅಷ್ಟಮ ಸ್ಥಾನದಲ್ಲಿರುವ ಗ್ರಹದೊಂದಿಗೆ ಇದ್ದು, ಭಾಗ್ಯೇಶ-ಲಾಭೇಶರೂ ಬಲಾಢ್ಯರಿದ್ದರೆ ಆಕಸ್ಮಿಕವಾಗಿ ಧನಪ್ರಾಪ್ತಿ ಆಗುತ್ತದೆ.

ಅಷ್ಟಮೇಶನು ಬಲಾಢ್ಯನಾಗಿ ಭಾಗ್ಯ, ಪಂಚಮ, ಲಾಭ ಸಪ್ತಮಸ್ಥಾನ ದಲ್ಲಿರುವುದು ಸಾಂಪತ್ತಿಕ ದೃಷ್ಟಿಯಿಂದ ಉತ್ತಮ.

ಈ ಕೆಳಗೆ ಕಾಣಿಸಿದ ಯೋಗಗಳಿದ್ದರೆ ಹೆಣ್ಣು ಕೊಟ್ಟ ಮಾವನಿಂದ ಧನ ಪ್ರಾಪ್ತಿ ಆಗುತ್ತದೆ.

(೧) ಸಪ್ತಮಾಧೀಶರ ಹಾಗೂ ಅಷ್ಟಮಾಧೀಶರ ಶುಭಸಂಬಂಧ ಯೋಗವು ೭-೮-೯-೧೧ ಸ್ಥಾನದಲ್ಲಿದ್ದರೆ.

(೨) ಅಷ್ಟಮೇಶನು ಸಪ್ತಮದಲ್ಲಿಯೂ ಸಪ್ತಮೇಶನು ಅಷ್ಟಮ ದಲ್ಲಿದ್ದರೆ,

(೩) ಬಲಾಢ್ಯ ಗುರು ಸಪ್ತಮದಲ್ಲಿ ಇಲ್ಲವೇ ಅಷ್ಟಮದಲ್ಲಿ ಇದ್ದರೆ.

(೪) ಸಪ್ತಮಾಧೀಶ ಹಾಗೂ ಅಷ್ಟಮಾಧೀಶರ ಶುಭಸಂಬಂಧವು ಲಾಭಾಧೀಶನೊಂದಿಗೆ ಇದ್ದರೆ,

(೫) ಬಲಾಢ್ಯ ಶುಕ್ರನಾಗಲೀ ಚಂದ್ರನಾಗಲೀ ಅಷ್ಟಮದಲ್ಲಿದ್ದರೆ

(೬) ಅಷ್ಟಮೇಶರ ಹಾಗೂ ಧನೇಶರ ಶುಭ ಸಂಬಂಧಯೋಗವು ೨-೯-೧೧ ಸ್ಥಾನದಲ್ಲಿದರೆ,

(೭) ಲಾಭೇಶ-ಅಷ್ಟಮೇಶರ ಅಥವಾ ಅಷ್ಟಮೇಶ ಸುಖೇಶರ ಶುಭ ಸಂಬಂಧಯೋಗವು ೪-೨-೯-೧೧ ಸ್ಥಾನದಲ್ಲಿದ್ದರೆ,

ಮೇಲೆಂದ ಕಾಣಿಸಿದ ಯೋಗಗಳಿದ್ದರೆ ಲಂಚದಿಂದಾಗಲೀ ಕಾಣಿಕೆ ಯಿಂದಾಗಲೀ ಭಕ್ತರಿಂದಾಗಲೀ ಧನಲಾಭವಾಗುತ್ತದೆ.

(೧) ಅಷ್ಟಮೇಶನಾದ ಚಂದ್ರನು ಲಾಭೇಶನೊಂದಿಗೆ ಚತುರ್ಥದಲ್ಲಿ ಇಲ್ಲವೆ ಧನೇಶನೊಂದಿಗೆ ಧನದಲ್ಲಿ ಇಲ್ಲವೇ ಲಗ್ನೇಶನೊಂದಿಗೆ ಲಗ್ನ ಇಲ್ಲವೇ ಸುಖ ಸ್ಥಾನದಲ್ಲಿದ್ದರೆ.

(೨) ಅಷ್ಟಮೇಶನಾದ ಬುಧನು ಲಾಭೇಶನೊಂದಿಗೆ ಲಾಭ ಇಲ್ಲವೆ ಧನದಲ್ಲಿ ಇದ್ದರೆ ಅಥವಾ ಭಾಗ್ಯೇಶನೊಂದಿಗೆ ಭಾಗ್ಯ ಇಲ್ಲವೆ ಸುಖ ಸ್ಥಾನದಲ್ಲಿದ್ದರೆ,

(೩) ಅಷ್ಟಮೇಶನಾದ ಗುರುಉ ಪಂಚಮೇಶನೊಂದಿಗೆ ೫-೧೧-೨ ಸ್ಥಾನದಲ್ಲಿದ್ದರೆ,

(೪) ಅಷ್ಟಮೇಶನಾದ ಶನಿಯೂ ಲಾಭೇಶನೊಂದಿಗೆ ಲಾಭದಲ್ಲಿ ಇಲ್ಲವೆ ಸುಖ ಸ್ಥಾನದಲ್ಲಿದ್ದರೆ ಅಥವಾ ಅಷ್ಟಮೇಶನಾದ ಶನಿಯೂ, ಪಂಚಮೇಶನೊಂದಿಗೆ ಪಂಚಮದಲ್ಲಿದ್ದರೆ,

(೫) ಅಷ್ಟಮೇಶನಾದ ಕುಜನು ಭಾಗ್ಯೇಶನೊಂದಿಗೆ ಭಾಗ್ಯದಲ್ಲಿ ಇದ್ದರೆ ಅಥವಾ ಅಷ್ಟಮೇಶನಾದ ಕುಜನು ಭಾಗ್ಯೇಶನೊಂದಿಗೆ ಭಾಗ್ಯ ಇಲ್ಲವೆ ಧನಸ್ಥಾನದಲ್ಲಿದ್ದರೆ,

(೬) ಅಷ್ಟಮೇಶನಾದ ಶುಕ್ರನು ಭಾಗ್ಯೇಶನೊಂದಿಗೆ ಭಾಗ್ಯ ಇಲ್ಲವೆ ಧನಸ್ಥಾನದಲ್ಲಿದ್ದರೆ ಅಥವಾ ಅಷ್ಟಮೇಶನಾದ ಶುಕ್ರನು ಪಂಚಮೇಶನೊಂದಿಗೆ ಪಂಚಮ ಇಲ್ಲವೆ ಭಾಗ್ಯೇಶನೊಂದಿಗೆ ಭಾಗ್ಯದಲ್ಲಿದ್ದರೆ.



# ಶುಭ ಸಂಖ್ಯೆ

ನಮ್ಮ ಗ್ರಾಹಕರು ವಿಚಾರಿಸುವ ಇನ್ನೊಂದು ಪ್ರಶ್ನೆ ಅಂದರೆ ಶುಭ ಸಂಖ್ಯೆ ಅಥವಾ ಶುಭ ಅಂಕಿ ಯಾವುದು ಎಂದು. ಅರ್ಥಾತ ಯಾವ ನಂಬರಿನ ತಿಕೀಟನ್ನು ಕೊಳ್ಳಬೇಕು ? ಇದಕ್ಕೆ ಉತ್ತರ ಕೊಡುವದು ಸ್ವಲ್ಪ ಕಠಿಣವೇ ಆಗುತ್ತದೆ. ಯಾವ ವರ್ಷ ಯಾವ ತಿಂಗಳು ಯಾವ ದಿನ ಯಾವ ವೇಳೆಯಲ್ಲಿ ತಿಕೀಟನ್ನು ಕೊಳ್ಳಬೇಕೆಂಬುದನ್ನು ಸುಲಭವಾಗಿ ಹೇಳಬಹುದು. ಆದರೆ ಯಾವ ಸಂಖ್ಯೆಯ (ನಂಬರಿನ) ಮೇಲೆ ತಿಕೀಟನ್ನು ಕೊಳ್ಳಬೇಕೆಂಬುದನ್ನು ಸುಲಭವಾಗಿ ಹೇಳಲುಬಾರದು.

ಯಾವ ಗ್ರಹಕ್ಕೆ ಯಾವ ಅಂಕಿಯು ಶುಭದಾಯಕವು ಎಂಬುದನ್ನು ಇನ್ನೂ ನಿರ್ಣಯಿಸಿಲ್ಲ. ಆಧುನಿಕ ಜ್ಯೋತಿರ್ವಿದರು ಹಾಗೂ ಪಾಶ್ಚಿಮಾತ್ಯ ಜ್ಯೋತಿರ್ವಿದರೂ ಸಂಖ್ಯಾಶಾಸ್ತ್ರದ ಮೇಲೆ ಪ್ರಯತ್ನ ನಡೆಸಿದ್ದಾರೆ. ನಾವಾದರೂ ಸಂಶೋಧನ ಮಾಡಿ 'ಸಂಖ್ಯಾಶಾಸ್ತ್ರ' ಎಂಬ ಪ್ರತ್ಯೇಕ ಗ್ರಂಥವನ್ನು ಪ್ರಕಟಿಸುವವರಿದ್ದೇವೆ. ಪ್ರಸ್ತುತ ಈ ವಿಷಯಕ್ಕೆ ಬೇಕಾಗುವ ಸಂಖ್ಯಾ ವಿಷಯವನ್ನು ಮಾತ್ರ ಇಲ್ಲಿ ವಿವೇಚಿಸಲಾಗಿದೆ.

ಗಣಿತ ಶಾಸ್ತ್ರದಲ್ಲಿಯ ಮೂಲ ಅಂಕಿಗಳಾದ ೧ ರಿಂದ ೯ ಅಂಕಿಗಳು ಮೂಲಾಧಾರವಾಗಿರುತ್ತವೆ. ಈ ಅಂಕಿಗಳ ಆಧಾರದ ಮೇಲಿಂದ ಕೋಟ್ಯಾನುಕೋಟಿಯ ವರೆಗೆ ಎಣಿಕೆ ಮಾಡಬಹುದು. ಉದಾ : ೧ ರ ಮುಂದೆ ಶೂನ್ಯ ಕೊಟ್ಟರೆ ಹತ್ತು ಅಂಕ ನಿರ್ಮಿತವಾಗುತ್ತದೆ. ಹತ್ತಕ್ಕೆ ಎರಡು ಕೂಡಿಸಿದರೆ ಹನ್ನೆರಡು ಅಂಕ ಆಗುತ್ತದೆ. ಇದರಂತೆ ಒಂದರ ಮುಂದೆ ನಾಲ್ಕು ಅಂಕಿಯನ್ನು ಎರಡು ಸಾರೆ ಇಟ್ಟರೆ ನೂರಾನಾಲ್ವತ್ತಾನಾಲ್ಕು ಅಂಕ ಆಗುತ್ತದೆ. ಈ ಪ್ರಕಾರ ನಿರ್ಮಿತವಾದ ಯಾವುದೇ ದೊಡ್ಡ ಸಂಖ್ಯೆಯನ್ನು ಒಂಟಿ

ಅಂಕಿಯನ್ನಾಗಿ ಸಹ ಮಾಡಬಹುದು. ಉದಾ :– ಐದು ಸಾವಿರದಾ ಮೂರು ನೂರಾ ನಾಲ್ವತ್ತೊಂಬತ್ತು ಈ ಅಂಕಿಯನ್ನು ಒಂಟಿ ಅಂಕಿಯು

೫ + ೩ + ೪ + ೯ = ೨೧ = ೨ + ೧ = ೩

ಈ ಮೂರನೇ ಅಂಕಿಯು ೫೩೪೯ ಅಂಕಿಯ ಆತ್ಮೀಯ ಅಂಕಿ ಅಥವಾ ದೈವೀ ಅಂಕಿ ಎಂದು ಕರೆಯಬಹುದು.

ಈ ೧ ರಿಂದ ೯ ರ ವರೆಗಿನ ಮೂಲ ಅಂಕಿಗಳು ಭಿನ್ನ ಭಿನ್ನ ಗುಣ ಧರ್ಮದ್ದು, ಹಾಗೂ ಭಿನ್ನ ಭಿನ್ನ ಗ್ರಹಗಳ ಅಂಕಿಯೂ ಆಗಿರುವದರಿಂದ ಯಾವ ವ್ಯಕ್ತಿಗೆ ಯಾವ ಅಂಕಿಯು ಶುಭದಾಯಕ ಇರುವದೆಂಬುದನ್ನು ತಿಳಿಯಲು ಕೆಳಗೆ ಕೊಡಲಾಗಿದೆ.

ಮಾನವನ ಜೀವನದ ಮೇಲೆ ಪ್ರಭಾವವನ್ನು ಸ್ಥಾಪಿಸಿದ ಈ ನವಗ್ರಹ ಗಳು ಹೇಗೆ ಇರುವವೋ ಹಾಗೆ ಈ ೧ ರಿಂದ ೯ ಮೂಲ ಅಂಕಿಗಳು ಮಾನವನ ಜೀವನದ ಮೇಲೆ ಪ್ರಭಾವವನ್ನು ಬೀರಬಲ್ಲವು. ಹಾಗಾದರೆ ಯಾವ ಅಂಕಿಗೆ ಯಾವ ಅಂಕಿ ಗ್ರಹವು ಸೂಚಿಸುತ್ತದೆ ಅಥವಾ ಯಾವ ಅಂಕಿಗೆ ಯಾವ ಗ್ರಹವು ಶುಭದಾಯಕವಿರುತ್ತದೆ ಎಂಬುದನ್ನು ಕೆಳಗೆ ಕೊಡಲಾಗುತ್ತದೆ.

ಭಿನ್ನ ಭಿನ್ನ ಗ್ರಹಗಳಿಗೆ ಭಿನ್ನ ಭಿನ್ನ ಅಂಕಿಗಳು ಆತ್ಮೀಯ ಅಂಕಿಗಳಿರುತ್ತವೆ. ರವಿ = ೧ ಚಂದ್ರ = ೨ ಮಂಗಳ = ೯. ಬುಧ = ೫. ಗುರು = ೩. ಶುಕ್ರ = ೬. ಶನಿ = ೮. ರಾಹು = ೭. ಕೇತು = ೪.

ಯಾರೊಬ್ಬರ ಜಾತಕ ನೋಡಿದ ಕೂಡಲೇ ಆ ಜಾತಕಕ್ಕೆ ಅರ್ಥಾತ ಅವರಿಗೆ ರಾಜಯೋಗಕಾರಕ ಗ್ರಹಗಳಾವವು ಅಥವಾ ಆ ಜಾತಕಕ್ಕೆ ಬಲಾಢ್ಯ ಗ್ರಹ ಯಾವುದು ಎಂಬುದನ್ನು ನೋಡಿಕೊಂಡು ಆ ಗ್ರಹಕ್ಕೆ ಇರುವ ಸಂಖ್ಯೆಯ ತಿಕೀಟನ್ನು ಪಡೆಯಬೇಕು. ಉದಾ :— ಯಾರೊಬ್ಬನ ಜಾತಕ ದಲ್ಲಿ ಶುಕ್ರನು ಬಲವಂತನಿದ್ದಾನೆಂದು ತಿಳಿದರೆ ಅವನಿಗೆ ೬ ನೇ ನಂಬರ ಅಥವಾ ೬ ನೇ ಅಂಕಿಯು ಶುಭದಾಯಕವು. ಅರ್ಥಾತ ಶುಕ್ರನ ನಂಬರಿನ ತಿಕೀಟನ್ನು ಕೊಳ್ಳಬೇಕು. ಉದಾ :– ೨೫೪೧೩ ಈ ಸಂಖ್ಯೆ ತಿಳಿಯಿರಿ ಇದರ ದೈವಿ ಅಂಕಿ ಅಂದರೆ ೨ + ೫ + ೪ + ೧ + ೩ = ೧೫. ೧ + ೫ = ೬. ಇರುತ್ತದ. ಹೀಗೆ ಯಾವುದೇ ತಿಕೀಟಿನ ಬೇರೀಜನ್ನು ಮಾಡಬೇಕು. ಜಾತಕ ದಲ್ಲಿಯ ಬಲಾಢ್ಯ ಗ್ರಹದ ಅಂಕಿಯ ತಿಕೀಟನ್ನು ಕೊಳ್ಳಬೇಕು.

೨ ನೇ ರೀತಿ: ಜಾತಕದ ಅಷ್ಟಮಂದ ಸ್ಥಾನದಲ್ಲಿ ಯಾವ ಸಂಖ್ಯೆ ಬರುವದೋ ಆ ಸಂಖ್ಯೆಯ ನಂಬರಿನ ತಿಕೀಟನ್ನು ಕೊಳ್ಳಬೇಕು. ಉದಾ:— ಯಾರೊಬ್ಬರದು ವೃಷಭ ಲಗ್ನವಿದೆ ಅಂತಾ ತಿಳಿದರೆ ಅಷ್ಟಮ ಸ್ಥಾನದಲ್ಲಿ ಅಂಕಿ ಬರುತ್ತಿದೆ ಅಂದ ಬಳಿಕ ೯ ಆತ್ಮೀಯ ಸಂಖ್ಯೆ ಬರುವ ತಿಕೀಟನ್ನು ಕೊಳ್ಳಬೇಕು. ಅಥವಾ ಅಷ್ಟಮೇಶನು ಯಾವ ರಾಶಿಯಲ್ಲಿ ಇರುವನೋ ಆ ರಾಶಿಯ ನಂಬರಿನ ತಿಕೀಟನ್ನು ಕೊಳ್ಳಬೇಕು. ಉದಾ:—ವೃಷಭ ಲಗ್ನದ ಅಷ್ಟಮೇಶನು ಕರ್ಕ ರಾಶಿಯಲ್ಲಿದ್ದಾನೆಂದು ತಿಳಿದರೆ ನಾಲ್ಕನೇ ನಂಬರಿನ ತಿಕೀಟನ್ನು ಕೊಳ್ಳಬೇಕು.

೩ ನೇ ರೀತಿ : ಈ ಮೂರನೇ ರೀತಿಯು ಮೊದಲನೇ ಎರಡನೇ ರೀತಿಗಿಂತ ಭಿನ್ನವಾಗಿದೆ. ಇಲ್ಲಿ ಗ್ರಹಗಳು ನೈಸರ್ಗಿಕವಾಗಿ ಯಾತ ನಂಬರಿನ ಸ್ಥಾನದ ಮೇಲೆ ಹಾಗೂ ಯಾವ ನಂಬರಿನ ರಾಶಿಯ ಅಧಿಪತ್ಯವನ್ನು ಹೊಂದಿರುವವೋ ಆ ಆ ಸಂಖ್ಯೆಗಳೇ ಆ ಆ ಗ್ರಹಗಳ ದೈವೀ ಅಂಕಿಗಳಾಗಿರುತ್ತವೆ. ರವಿ ೫, ಚಂದ್ರ ೪, ಮಂಗಳ ೧ ಹಾಗೂ ೮, ಬುಧ ೩ ಹಾಗೂ ೬ ಗುರು ೯, ಶುಕ್ರ ೨ ಹಾಗೂ ೭, ಶನಿ ೧ ಹಾಗೂ ೨ ಈ ಅಂಕಿಗಳು ಆ ಆ ಗ್ರಹಗಳ ಆತ್ಮೀಯ ಅಂಕಿಗಳಿರುತ್ತವೆ. ಒಂದೆ ಹೇಳಿದಂತೆ ಜಾತಕದಲ್ಲಿಯ ಯಾವ ಗ್ರಹಗಳ ಬಲಾಢ್ಯವಿರುವವೋ ಆ ಆ ಗ್ರಹಗಳ ಅಂಕಿಗಳು ಅವರಿಗೆ ಶುಭವಾಗಿರುತ್ತವೆ.

ವಿಶೇಷ ಸೂಚನೆ:— ಓದುಗರು ಮೇಲೆ ಕಾಣಿಸಿದ ರೀತಿಗಳನ್ನು ಪ್ರಯೋಗ ಮಾಡಿ ಸತ್ಯ ಸಂಶೋಧನೆಗಾಗಿ ನಮಗೆ ತಿಳಿಸಬಹುದು.



## ಅನುಕೂಲ ಕಾಲ

ಅನುಕೂಲ ಕಾಲ ಈ ವಿಷಯದ ಬಗ್ಗೆ ಎಷ್ಟು ಬರೆದರೂ ಕಡಿಮೆಯೇ. ಕಾರಣ ಭಿನ್ನ ಭಿನ್ನ ವಿಷಯಂಗಳಿಗೆ ಭಿನ್ನ-ಭಿನ್ನ ಕಾಲವು ಶುಭವಿರುತ್ತದೆ. ಉದಾ: —ವಿವಾಹ ಯೋಗಕ್ಕೆ ಅನುಕೂಲ ಕಾಲ ಬೇರೆ. ಶೈಕ್ಷಣಿಕಕ್ಕೆ ಅನುಕೂಲ ಕಾಲ ಬೇರೆ ಉದ್ಯೋಗ, ವ್ಯವಹಾರಕ್ಕೆ, ಅನುಕೂಲ ಕಾಲ ಬೇರೆ ಇತ್ಯಾದಿ. ಪ್ರಸ್ತುತ: ಈ ಪುಸ್ತಕದಲ್ಲಿ ಈ ವಿಷಯಕ್ಕೆ ಬೇಕಾಗುವ ಅನುಕೂಲ ಮಹೂರ್ತಗಳಲ್ಲಿ ವಿವರಿಸಲಾಗುವದು.

ಲಾಟರೀ ತಿಕೀಟು ಕೊಳ್ಳುವದಾಗಲಿ ಪ್ರಾಯಿಜ ಬಾಂಡ ಮೊದಲಾದವುಗಳನ್ನು ಕೊಳ್ಳುವದಾಗಲೀ ಅಥವಾ ಯಾವುದಾದರೊಂದು ಸ್ಪರ್ಧೆಯಲ್ಲಿ ಭಾಗವಹಿಸುವದಾಗಲಿ ಶುಭ ವೇಳೆ ಯಾವುದೆಂಬುದನ್ನು ವಿಚಾರಿಸುತ್ತಾರೆ.

ಲಾಟರೀ ತಿಕೀಟನ್ನು ಎಂದು ಯಾವ ದಿನ ಯಾವ ವೇಳೆಯಲ್ಲಿ ತೆಗದು ಕೊಳ್ಳಬೇಕು ಎಂದು ವಿಚಾರಿಸುವ ಪೂರ್ವದಲ್ಲಿ ಲಾಟರಿ ಯೋಗವಿದೆಯೋ ಎಂಬುದನ್ನು ಪ್ರಾಮುಖ್ಯವಾಗಿ ಮೊದಲು ನೋಡಬೇಕು,

**ಕಾಲ ನಿರ್ಣಯ**

ಕಾಲ ನಿರ್ಣಯದಲ್ಲ ಅನೇಕ ಪ್ರಕಾರಗಳಿವೆ. ೧) ಗೋಚರಿ ಗ್ರಹಗಳ ಬಲಾಬಲ ೨) ಗೋಚರೀ ಗ್ರಹಗಳ ಪರಿಭ್ರಮಣದಿಂದ ಆಗುವ ಯೋಗ ೩) ದಶಾ ಪದ್ಧತಿ ೪) ದಿನ ವರ್ಷ ಪದ್ಧತಿ ೫) ಪ್ರಾಥಮಿಕ ಯೋಗ ಪದ್ಧತಿ ೬) ತಾಜಿಕ ಪದ್ಧತಿ.

ಗೋಚರೀ ಗ್ರಹಗಳ ಬಲಾಬಲವನ್ನು ಕೆಳಗೆ ಕೊಡಲಾಗಿದೆ.

ರವಿ:— ರವಿಯು ಗೋಚರಿಯಿಂದ ೩-೬-೧೦-೧೧ನೇ ಯಾವನಾಗಿ ಬಂದರೆ ಶುಭದಾಯಕನು.

**ಚಂದ್ರ:**— ಚಂದ್ರನು ಗೋಚರಿಯಿಂದ ೧-೨-೩-೫-೭-೯-೧೧ ನೇಯವನಾಗಿ ಬಂದರೆ ಶುಭದಾಯಕನು.

**ಮಂಗಳ:**— ಮಂಗಳನು (ಕುಜನು) ಗೋಚರಿಯಿಂದ ೩-೬-೧೦-೧೧ ನೇಯವನಾಗಿ ಬಂದರೆ ಶುಭದಾಯಕನು.

**ಬುಧ:**— ಬುಧನು ಗೋಚರಿಯಿಂದ ೧-೨-೩-೫-೭-೯-೧೧ ನೇಯವನಾಗಿ ಬಂದರೆ ಶುಭದಾಯಕನು.

**ಗುರು:**— ಗುರು ಗೋಚರಿಯಿಂದ ೨-೫-೭-೯-೧೦-೧೧ ನೇಯವನಾಗಿ ಬಂದರೆ ಉತ್ತಮನು.

**ಶುಕ್ರ:**— ಶುಕ್ರನು ಗೋಚರಿಯಿಂದ ೧-೨-೩-೪-೭-೯-೧೧-೧೨ ನೇಯವನಾಗಿ ಬಂದರೆ ಶುಭದಾಯಕನು.

**ಶನಿ:**— ಶನಿಯು ಗೋಚರಿಯಿಂದ ೩-೬-೧೦-೧೧ ನೇಯವನಾಗಿ ಬಂದರೆ ಉತ್ತಮನು. ಶನಿಯು ಉಚ್ಚ ಇಲ್ಲವೆ ಸ್ವಕ್ಷೇತ್ರ ಇಲ್ಲವೆ ಮಿತ್ರ ರಾಶಿಯಲ್ಲಿದ್ದು, ಗೋಚರಿಯಿಂದ ೮ ನೇಯವನಾಗಿದ್ದರೂ ಕೂಡ ಆಕಸ್ಮಿಕ ಧನಲಾಭವನ್ನು ಕೊಡುತ್ತಾನೆ. ಆದರೆ ಅದರ ಹಿಂದೆ ಗಂಡಾಂತರವನ್ನು ತರುವನು.

ರಾಹು-ಕೇತುಗಳು ಗೋಚರಿಯಿಂದ ೩-೬-೧೦-೧೧ನೇಯವನಾಗಿದ್ದರೆ ಶುಭದಾಯಕರು.

ಗೋಚರಿಯಿಂದ ಗ್ರಹಗಳು ಭ್ರಮಿಸುವಾಗ ಕೇವಲ ರಾಶಿ ದೃಷ್ಟಿಯಿಂದ ನೋಡದೇ ಜಾತಕದ ಸ್ಥಾನದ ಮೇಲೆ ಹಾಗೂ ಮೂಲ ಜಾತಕದಲ್ಲಿರುವ ಗ್ರಹಗಳ ಕೂಡ ಆಗುವ ಶುಭಾಶುಭಯೋಗವನ್ನು ಕೂಡ ಪರಿಶೀಲಿಸಬೇಕು. ಉದಾ:— ಯಾರೊಬ್ಬರದು ಮೀನ ರಾಶಿ ಇದೆ ಅಂತ ತಿಳಿಯಿರಿ. ಅಂಥವರಿಗೆ ರವಿಯು ಗೋಚರಿಯಿಂದ ಸಿಂಹ ರಾಶಿಯಲ್ಲಿ ಪ್ರವೇಶಿಸುತ್ತಿರುವಾಗ ೬ ನೇಯವನಾಗಿ ಬಂದರೆ ಶುಭದಾಯಕನಾಗುವನು. ಆದರೆ ಅದೇ ವ್ಯಕ್ತಿಯ ಜಾತಕದಲ್ಲಿ ಶನಿಯು ಸಿಂಹ ರಾಶಿಯಲ್ಲಿದ್ದು, ಗೋಚರಿಯಿಂದ ರವಿಯು ಪರಿಭ್ರಮಣವು ಸಿಂಹ ರಾಶಿಯಲ್ಲಿ ಬಂದಾಗ ೬ನೇಯವನಾಗಿ ಬಂದರೂ ಅಶುಭ

ದಾಯಕನು ಆಗುವನು. ಇದರಂತೆ ಮೂಲ ಗ್ರಹಗಳ ಮೇಲಿಂದ ಗೋಚರೀ ಗ್ರಹಗಳು ಭ್ರಮಿಸುವಾಗ ಅಥವಾ ಮೂಲಗ್ರಹಗಳೊಂದಿಗೆ ಗೋಚರೀ ಗ್ರಹ ಗಳ ಯೋಗವನ್ನು ಪರಿಶೀಲಿಸಬೇಕಾಗುತ್ತದೆ. ಈ ಯೋಗವನ್ನು ಹೇಗೆ ನೋಡಬೇಕೆಂಬುದನ್ನು ಕೆಳಗೆ ಕೊಡಲಾಗಿದೆ.

ರವಿ :— ಗೋಚರಿಯಿಂದ ರವಿಯ ಭ್ರಮಣವು ರವಿ, ಮಂಗಳ, ಗುರು, ಶುಕ್ರ, ಬುಧ ಇವರ ಮೇಲಿಂದ ಆಗುವಾಗ ಅಥವಾ ಇವರೊಂದಿಗೆ ಶುಭಯೋಗ ಮಾಡುತ್ತಿರುವಾಗ ಕೂಡ ಶುಭದಾಯಕನಾಗುವನು. ಗೋಚರೀ ಯಿಂದ ರವಿಯ ಭ್ರಮಣವು ಚಂದ್ರ, ಶನಿ, ರಾಹು, ಕೇತು ಇವರ ಮೇಲಿಂದ ಆಗುವಾಗ ಅಥವಾ ಇವರೊಂದಿಗೆ ಸಂಸಪ್ತಕ, ಷಡಾಷ್ಟಕ ಮೊದಲಾದ ಅಶುಭ ಯೋಗ ಮಾಡುತ್ತಿರುವಾಗ ಅಶುಭದಾಯಕನಾಗುವನು.

ಚಂದ್ರ :— ಗೋಚರಿಯಿಂದ ಚಂದ್ರನ ಭ್ರಮಣವು ಚಂದ್ರ, ರವಿ, ಶುಕ್ರ, ಗುರು ಇವರ ಮೇಲಿಂದ ಭ್ರಮಿಸುವಾಗ ಅಥವಾ ಈ ಗ್ರಹಗಳೊಂದಿಗೆ ಶುಭಯೋಗ ಮಾಡುತ್ತಿರುವಾಗ ಶುಭದಾಯಕನಾಗುವನು ಉಳಿದ ಗ್ರಹ ಗಳ ಮೇಲಿಂದ ಭ್ರಮಿಸುವಾಗ ಅಥವಾ ಉಳಿದ ಗ್ರಹಗಳೊಂದಿಗೆ ಅಶುಭ ಯೋಗ ಮಾಡುತ್ತಿರುವಾಗ ಅಶುಭದಾಯಕನಾಗುವನು.

ಮಂಗಳ :— ಮಂಗಳನ ಗೋಚರಿಯ ಭ್ರಮಣವು ಮಂಗಳ, ರವಿ, ಗುರು ರಾಹು ಇವರ ಮೇಲಿಂದ ಆಗುವಾಗ ಅಥವಾ ಇವರೊಂದಿಗೆ ಶುಭ ಯೋಗ ಮಾಡುತ್ತಿರುವಾಗ ಶುಭದಾಯಕನು. ಮಂಗಳನ ಪರಿಭ್ರಮಣವು ಬುಧ, ಶುಕ್ರರ ಮೇಲಿಂದ ಆಗುವಾಗ ಮಧ್ಯಮದಾಯಕನು. ಆದರೆ ಶನಿ ಚಂದ್ರ, ಕೇತು ಇವರ ಮೇಲಿಂದ ಭ್ರಮಿಸುವಾಗ ಅಥವಾ ಇವರೊಂದಿಗೆ ಅಶುಭಯೋಗ ಮಾಡುತ್ತಿರುವಾಗ ಅಶುಭದಾಯಕನು.

ಬುಧ :— ಬುಧನ ಪರಿಭ್ರಮಣವು ಬುಧ, ಶುಕ್ರ, ಶನಿ ರವಿ ಇವರ ಮೇಲಿಂದ ಆಗುವಾಗ ಶುಭದಾಯಕನು, ಉಳಿದ ಗ್ರಹಗಳಿಗೆ ಅಶುಭ ದಾಯಕನು.

ಗುರು :— ಗುರುವಿನ ಭ್ರಮಣವು ಮೂಲ ಜಾತಕದಲ್ಲಿಯ ರವಿ, ಗುರು, ಮಂಗಳ ಇವರೊಂದಿಗೆ ಆಗುವಾಗ ಅಥವಾ ಇವರೊಂದಿಗೆ ಶುಭ

ಯೋಗ ಮಾಡುತ್ತಿರುವಾಗ ಶುಭದಾಯಕನು, ಶನಿ ಚಂದ್ರರ ಮೇಲಿಂದ ಭ್ರಮಿಸುವಾಗ ಅಥವಾ ಇವರೊಂದಿಗೆ ಅಶುಭಯೋಗ ಮಾಡುತ್ತಿರುವಾಗ ಅಶುಭದಾಯಕನಾಗುವನು.

ಶುಕ್ರ :— ಮೂಲ ಕುಂಡಲಿಯಲ್ಲಿಯ ಶುಕ್ರ, ಬುಧ, ಶನಿ, ಚಂದ್ರ ಇವರ ಮೇಲಿಂದ ಭ್ರಮಿಸುವಾಗ ಇವರೊಂದಿಗೆ ಶುಭಯೋಗ ಮಾಡುತ್ತಿರುವಾಗ ಶುಭದಾಯಕನಾಗುವನು.

ಶನಿ : —ಮೂಲ ಕುಂಡಲಿಯಲ್ಲಿಯ ಶನಿ, ಶುಕ್ರ, ಬುಧ, ಗುರು ಇವರ ಮೇಲಿಂದ ಗೋಚರಿಸುವಾಗ ಶನಿಯು ಭ್ರಮಣವು ಅಥವಾ ಇವರೊಂದಿಗೆ ಶುಭಯೋಗ ಮಾಡುವಾಗ ಶುಭದಾಯಕನಾಗುವನು. ಆದರೆ ಅದೇ ಶನಿಯು ಭ್ರಮಣವು ರವಿ, ಚಂದ್ರ, ಮಂಗಳ, ರಾಹು ಇವರ ಮೇಲಿಂದಾಗುವ ಅಥವಾ ಇವರೊಂದಿಗೆ ಷಡಾಷ್ಟಕ ಸಮಸಪ್ತಕ ಮುಂತಾದ ಅಶುಭ ಯೋಗ ಮಾಡುವಾಗ ಅಶುಭದಾಯಕನಾಗುತ್ತಾನೆ.

ರಾಹು-ಕೇತು :—ರಾಹು-ಕೇತು ಇವರ ಭ್ರಮಣವು ಬುಧ, ಗುರು, ಮಂಗಳ ರಾಹು, ಶುಕ್ರ ಇವರ ಮೇಲಿಂದ ಭ್ರಮಿಸುವಾಗ ಶುಭದಾಯಕರಾಗುವರು.

**ಶುಭ ದಿನ :**

ಲಾಟರಿ ತಿಕಿಟ, ಪ್ರಾಯಿಜ ಬಾಂಡ ಮೊದಲಾದವುಗಳನ್ನು ಕೊಳ್ಳುವದಕ್ಕೆ ಶುಭ ಕಾಲ ಯಾವುದು ಅಂತು ಬಹುಜನ ವಿಚಾರಿಸುತ್ತಾರೆ.

ಮೊದಲನೇದಾಗಿ ಗೋಚರಿಯಂತೆ ಬಹು ಗ್ರಹಗಳು (ಸಾಡೇಸಾತಿ ಇತ್ಯಾದಿ ಇರದೇ) ಶುಭವಿರಬೇಕು ಹಾಗೂ ದಶಾಂತರ-ದಶೆಗಳೂ ನೈಸರ್ಗಿಕ ದಶೆಯೂ ಶುಭವಿದ್ದು, ಜಾತಕದಲ್ಲಿರುವ ಬಲಾಢ್ಯ ಗ್ರಹದ ಭಾಗ್ಯೋದಯ ಕಾಲವೂ ಇರಬೇಕು.

ಎರಡನೇದಾಗಿ ತೆಗೆದುಕೊಳ್ಳುವ ಕಾಲದ ಲಗ್ನ ಕುಂಡಲಿ (ಜಾತಕ) ಯಲ್ಲಿ ಅಷ್ಟಮೇಶ-ಪಂಚಮೇಶ-ಭಾಗ್ಯೇಶ-ಲಾಭೇಶ ಈ ನಾಲ್ಕು ಗ್ರಹಗಳು

ಹಾಗೂ ನಾಲ್ಕಾ ಸ್ಥಾನಗಳೂ ಶುಭವಿದ್ದು, ಗೋಚರಿಯಿಂದ ಚಂದ್ರನು ೪-೮-೧೨ ನೇಯವನಾಗಿ ಇರಕೂಡದು.

ಮೂರನೇಯದಾಗಿ ಶುಭಗ್ರಹಗಳ ಹೋರಾ ಆಗಲೀ ಮೂಲ ಜಾತಕ ದಲ್ಲಿಯ ಆಕಸ್ಮಿಕ ಧನಯೋಗಕಾರಕನ ಹೋರಾ ಆಗಲೀ ಇರಬೇಕು.

ಈ ಹೋರಾ ಹೇಗೆ ನೋಡಬೇಕೆಂಬುದಕ್ಕಾಗಿ ನಮ್ಮ 'ಪಂಚಾಂಗ' ಪ್ರದೀಪ ಗ್ರಂಥವನ್ನು ನೋಡಿರಿ.

## ದಶಾ ಪದ್ಧತಿ

ಆಕಸ್ಮಿಕ ಧನಯೋಗದ ಬಗ್ಗೆ ವಿಚಾರಿಸುವಾಗ ಕಾಲ ನಿರ್ಣಯವು ಬಹಳ ಮಹತ್ವದ್ದು ಇರುತ್ತದೆ. ಜಾತಕವೇನೋ ಬಲಾಢ್ಯವಿರಬಹುದು ಆಕಸ್ಮಿಕ ಧನಯೋಗವೂ ಇರಬಹುದು ಆದರೆ ಎಂದು ? ಆಕಸ್ಮಿಕ ಧನ ಯೋಗವೆಂದು ಆಗುತ್ತದೆ.

ಈ ಕಾಲ ನಿರ್ಣಯದಲ್ಲಿ ದಶಾಪದ್ಧತಿಯೂ ಒಂದು ಇರುತ್ತದೆ. ದಶಾ ಅಂತರ್ದಶೆಗಳು ಅನುಕೂಲವಿದ್ದರೆ ಮಾತ್ರ ಧನಯೋಗ ಪ್ರಾಪ್ತವಾಗುತ್ತದೆ. ಆದರ ದಶಾಪದ್ಧತಿಯನ್ನು ವಿಚಾರಿಸುವದು ಬಹಳೇ ತೊಡಕಿನ ಪ್ರಶ್ನೆ ೪೨ ಪ್ರಕಾರದ ದಶೆಗಳಿವೆ. ಅದಕ್ಕಾಗಿ ನಾವು ಪ್ರತ್ಯೇಕವಾದ 'ದಶಾದರ್ಪಣವೆಂಬ' ಗ್ರಂಥವನ್ನು ಶೀಘ್ರದಲ್ಲಿಯೇ ಪ್ರಕಟಿಸುವವರಿದ್ದೇವೆ. ಪ್ರಸ್ತುತ ಈ ವಿಷ ಯಕ್ಕೆ ಬೇಕಾಗುವ ದಶಾಮಹರ್ದಶೆಗಳ ವಿಚಾರವನ್ನು ಮಾತ್ರ ಇಲ್ಲಿ ಕೊಡ ಲಾಗುವದು.

ಭಿನ್ನ ಭಿನ್ನ ಲಗ್ನಗಳಿಗೆ ಭಿನ್ನ ಭಿನ್ನ ಗ್ರಹಗಳು ರಾಜಯೋಗಕಾರಕ ಗ್ರಹಗಳೂ ಹಾಗೂ ಆಕಸ್ಮಿಕ ಧನಯೋಗಕಾರಕ ಗ್ರಹಗಳೂ ಇರುತ್ತವೆ. ಎಂಬುದನ್ನು ಹಿಂದೆ ಹೇಳಿದೆ. ಆದುದರಿಂದ ಈ ರಾಜಯೋಗಕಾರಕ ಗ್ರಹ ಗಳು ಹಾಗೂ ಆಕಸ್ಮಿಕ ದನಯೋಗಕಾರಕ ಗ್ರಹಗಳು ಮೂಲ ಜಾತಕದಲ್ಲಿ ಬಲಾಢ್ಯವಿದ್ದು, ಆ ಗ್ರಹಗಳ ದಶಾ ಅಂತರ್ದಶೆಯಲ್ಲಿ ಆಕಸ್ಮಿಕವಾಗಿ ಧನಲಾಭ ವಾಗುತ್ತದೆ.

ಎರಡನೆಯದಾಗಿ ಭಿನ್ನ ಭಿನ್ನ ಗ್ರಹಗಳ ದಶಾ-ಅಂತರ್ದಶೆಯಲ್ಲಿ ಭಿನ್ನ ಭಿನ್ನ ರೀತಿಯಿಂದ ಲಾಭವಾಗುತ್ತದೆ. ಅಂದರೆ ಆ ಆ ಕಾರಕ ಹಾಗೂ ಆ ಆ ಭಾವಗ ಮತ್ತು ಆ ಆ ಗ್ರಹಗಳ ಗುಣಧರ್ಮದ ರೀತಿಯಂತೆ ಲಾಭ ವಾಗುತ್ತದೆ.

ಉದಾ : ಯಾರೊಬ್ಬರ ಜಾತಕದ ವೃಷಭ ಲಗ್ನದ ಪಂಚಮ ಸ್ಥಾನ ದಲ್ಲಿ ಬುಧನಿದ್ದಾನಂತ ತಿಳಿಯಿರಿ. ಆ ಜಾತಕನಿಗೆ ಬುಧನ ಮಹಾದಶೆಯಲ್ಲಿ ಪಂಚಮ ಹಾಗೂ ಧನಸ್ಥಾನದ ಭಾವದಂತೆ ಹಾಗೂ ಬುಧನ ಗುಣಧರ್ಮ ದಂತೆ ಲಾಭವಾಗುತ್ತದೆ. ಅಂದರೆ ಸಾಹಿತ್ಯದಲ್ಲಿ ಪತ್ರಿಕಾವ್ಯವಸಾಯದಲ್ಲಿ ಅಂಕಿಸಂಖ್ಯಾ ಶಾಸ್ತ್ರದಲ್ಲಿ ಮತ್ತು ಪಂಚಮ ಹಾಗೂ ಧನಸ್ಥಾನದ ಭಾವದಂತೆ ಇತ್ಯಾದಿ.

ಮೂರನೆಯದಾಗಿ ಅಷ್ಟಮೇಶನು ಬಲವಂತನಿದ್ದು, ಆತನ ದಶಾ ಅಂತರ್ದಶೆಯಲ್ಲಿ ಸಟ್ಟಾ ಲಾಟರಿಯಿಂದಲೂ ಪಂಚಮೇಶನು ಬಲವಂತನಿದ್ದು, ಆತನ ದಶಾ ಅಂತರ್ದಶೆಯ ರೇಸು, ಪ್ರಾಯಿಜಬಾಂಡ, ಸಾಹಿತ್ಯ ಸಂಗೀತ ಇವುಗಳಿಂದ ಲಾಭ ಹೀಗೆ ಆ ಆ ಭಾವಾಧೀಶರ ದಶಾ ಅಂತರ್ದಶೆಯಲ್ಲಿ ಆ ಭಾವಗಳ ಗುಣಧರ್ಮದಂತೆ ಹಾಗೂ ಆ ಭಾವೇಶರ ಕಾರಕದಂತೆ ಮತ್ತು ಭಾವೇಶರು ಯಾವ ಸ್ಥಾನದಲ್ಲಿರುವರೋ ಆ ಆ ಸ್ಥಾನದ ಭಾವದಂತೆ ಲಾಭ ವಾಗುತ್ತದೆ.

### ನೈಸರ್ಗಿಕ ದಶೆಗಳು

ವರಾಹಮಿಹಿರಾಚಾರರ ಬೃಹತ್ ಜಾತಕದಲ್ಲಿ ನೈಸರ್ಗಿಕ ದಶೆಗಳ ಕಾಲವನ್ನು ಕೆಳಗಿನಂತೆ ಕೊಟ್ಟಿದ್ದಾರೆ.

ಜನ್ಮದಿಂದ ಒಂದು ವರ್ಷದ ವರೆಗೆ ಚಂದ್ರ ದಶೆಯೂ, ವಯಸ್ಸಿನ ೧ ವರ್ಷದಿಂದ ೩ ವರ್ಷಗಳ ವರೆಗೆ ಮಂಗಳ ದಶೆ. ೩ ರಿಂದ ೧೨ ವರ್ಷದ ವರೆಗೆ ಬುಧ ದಶೆಯೂ, ೧೨ ರಿಂದ ೩೨ ರ ವರೆಗೆ ಶುಕ್ರದಶೆಯೂ ೩೨ ರಿಂದ ೫೦ ರ ವರೆಗೆ ಗುರುದಶೆಯೂ, ೫೦ ರಿಂದ ೭೦ ರ ವರೆಗೆ ರವಿದಶೆಯೂ, ೭೦ ರಿಂದ ೧೨೦ ರ ವರೆಗೆ ಶನಿದಶೆಯೂ ಹೀಗೆ ನೈಸರ್ಗಿಕ ದಶೆ ಕೊಟ್ಟಿದ್ದಾರೆ.

ಇಲ್ಲಿ ವಿಚಾರಿಸಬೇಕಾದ ಎರಡು ಸಂಗತಿಗಳಿವೆ. ಒಂದನೆಯದು ಇತ್ತೀಚೆಗೆ ಮಾನವ ೧೨೦ ರ ವರೆಗೆ ಜೀವಿಸುವದು ಅಪರೂಪ ಅಥವಾ ಜೀವಿಸಲಿಕ್ಕಿಲ್ಲ. ಕಾರಣ ೭೦ ರ ನಂತರ ಶನಿ ದಶೆ ಅಂತಾ ಅರ್ಥ ಮಾಡಬೇಕು. ೨ನೇಯದಾಗಿ ಈ ನೈಸರ್ಗಿಕ ದಶೆಗಳಲ್ಲಿ ರಾಹು–ಕೇತು ದಶೆಗಳ ಉಲ್ಲೇಖವಿಲ್ಲ.

ಇನ್ನು ಈ ನೈಸರ್ಗಿಕ ದಶೆಗಳನ್ನು ಆಕಸ್ಮಿಕ ಧನಯೋಗದ ಬಗ್ಗೆ ಹೇಗೆ ವಿಚಾರಿಸಬೇಕು ? ಮೂಲ ಕುಂಡಲಿಯಲ್ಲಿ ಯಾವ ಗ್ರಹ ಬಲಾಢ್ಯವಿರುವವೋ ಆ ಗ್ರಹಗಳ ನೈಸರ್ಗಿಕ ದಶೆಗಳು ಶುಭವಿರುತ್ತವೆ. ಕಾರಣ ಆಕಸ್ಮಿಕ ಧನ ಯೋಗಕ್ಕೆ ಮಹಾದಶೆಗಳೂ ಅಂತರ್ದಶೆಗಳೂ, ನೈಸರ್ಗಿಕ ದಶೆಗಳೂ ಶುಭ ವಿದ್ದು, ಗೋಚರೀ ಗ್ರಹಗಳೂ ಸಹ ಶುಭವಿದ್ದರೆ (ನಿಸ್ಸಂಶಯವಾಗಿ) ಆಕಸ್ಮಿಕ ಧನ ಪ್ರಾಪ್ತವಾಗುವದು. ಉದಾಹರಣೆಗೆ ಯಾರೊಬ್ಬ ವ್ಯಕ್ತಿಗೆ ನೈಸರ್ಗಿಕ ದಶೆ ಶುಭವಿದ್ದು, ವಿಂಶೋತ್ತರ ದಶೆ ಅಂತರ್ದಶೆಗಳು ಅಶುಭವಿದ್ದರೆ, ಆ ನೈಶರ್ಗಿಕ ದಶೆಗಳು ಅಶುಭವಿರುವ ಮೂಲಕ. ವಿಂಶೋತ್ತರಿ ದಶೆ ಅಂತರ್ದಶೆ ಗಳ ಅನಿಷ್ಠ ಪರಿಣಾಮ ಬಹಳೇ ಕಡಿಮೆಯಾಗುವದು. ಇದರಂತೆ ಯಾರೊಬ್ಬರಿಗೆ ನೈಸರ್ಗಿಕ ದಶೆ ಹಾಗೂ ವಿಂಶೋತ್ತರಿ ದಶೆ ಅಂತರ್ದಶೆಗಳು ಶುಭವಿದ್ದು, ಆ ಜಾತಕನಿಗೆ ಸಾಡೇಸಾತಿ ಮೊದಲಾದ ಗೋಚರಿ ಅನಿಷ್ಟ ಗ್ರಹಗಳ ಅಶುಭ ಪರಿಣಾಮ ಕೂಡಾ ಕಡಿಮೆಯಾಗುವದು.

## ಭಾಗ್ಯೋದಯ ಕಾಲ

ಬಹು ಜನರು ವಿಚಾರಿಸುವ ಪ್ರಶ್ನೆ ಅಂದರೆ ನಮಗೆ ಭಾಗ್ಯೋದಯ ಕಾಲವೆಂದು ? ಈ ಪ್ರಶ್ನೆಗೆ ಉತ್ತರ ಕೊಡುವುದು ಸ್ವಲ್ಪ ಕಠಿಣವಾಗುತ್ತದೆ. ಏಕೆಂದರೆ ಮೊದಲನೇದಾಗಿ ಜಾತಕವು ಶ್ರೇಷ್ಠ ದರ್ಜೆಯದ್ದು ಇರಬೇಕು. ಎರಡನೇದಾಗಿ ಅನುಕೂಲ ಕಾಲವೂ ಇರಬೇಕು. ಇನ್ನು ಗ್ರಹಗಳ ದೃಷ್ಟಿ ಯಿಂದ ನೋಡಿದರೆ ಭಿನ್ನ ಭಿನ್ನ ಗ್ರಹಗಳಿಗೆ ಭಾಗ್ಯೋದಯ ಕಾಲ ಬೇರೆ ಬೇರೆ ಇದ್ದು ಅದನ್ನು ಕೆಳಗೆ ಕೊಡಲಾಗಿದೆ.

ಜನ್ಮ ಕುಂಡಲಿಯಲ್ಲಿ (ಜಾತಕದಲ್ಲಿ) ಗುರು ಶುಭನಿದ್ದರೆ ವಯಸ್ಸಿನ ೧೬ ನೇ ವರುಷದಿಂದ ಭಾಗ್ಯೋದಯವನ್ನೂ ಸೂರ್ಯನು ಶುಭನಿದ್ದರೆ

ವಯಸ್ಸಿನ ೨೨ ರಿಂದ ಭಾಗ್ಯೋದಯವನ್ನು ಚಂದ್ರನು ಶುಭವಿದ್ದರೆ ವಯಸ್ಸಿನ ೨೪ ರಿಂದ ಭಾಗ್ಯೋದಯವನ್ನೂ ಬುಧನು ಬಲಾಢ್ಯನಿದ್ದರೆ ವಯಸ್ಸಿನ ೩೨ ರಿಂದ ಭಾಗ್ಯೋದಯವನ್ನೂ ಶನಿಯು ಬಲಿಷ್ಠನಿದ್ದರೆ ವಯಸ್ಸಿನ ೩೬ ರಿಂದ ಭಾಗ್ಯೋದಯವನ್ನೂ ರಾಹು ಬಲಾಢ್ಯವಿದ್ದರೆ ವಯಸ್ಸಿನ ೪೨ ರಿಂದ ಭಾಗ್ಯೋದಯವನ್ನೂ ಕೇತು ಬಲಿಷ್ಠನಿದ್ದರೆ ವಯಸ್ಸಿನ ೪೮ ರಿಂದ ಭಾಗ್ಯೋದಯವನ್ನೂ ಕೊಡುತ್ತಾರೆ.

ಜಾತಕದಲ್ಲಿ ಯಾವ ಗ್ರಹವು ಬಲಿಷ್ಠ ಇರುತ್ತದೆಯೋ ಆ ಆ ಗ್ರಹಗಳ ಭಾಗ್ಯೋದಯ ಕಾಲದಲ್ಲಿ ನಿಸ್ಸಂಶಯವಾಗಿ ಭಾಗ್ಯೋದಯವಾಗುತ್ತದೆ. ಈ ಭಾಗ್ಯೋದಯ ಕಾಲದಲ್ಲಿ ಅನಿಷ್ಟ ದಶಾ ಅಂತರದಶೆ ಇದ್ದರೂ ಗೋಚರೀಯಿಂದ ಸಾಡೇಸಾತಿ ಮೊದಲಾದ ಅಶುಭ ಗ್ರಹಗಳ ಪರಿಭ್ರಮಣವಿದ್ದರೂ ಯಾವ ಅಶುಭ ಪರಿಣಾಮವಾಗಲಾರದು. ಉದಾ:- ಯಾರೊಬ್ಬನ ಜಾತಕದಲ್ಲಿ ಶುಕ್ರನು ಬಲಾಢ್ಯನಿದ್ದಾನೆ ಅಂತ ತಿಳಿಯಿರಿ. ಆ ಜಾತಕದ ವಯಸ್ಸಿನ ೨೪ ರಿಂದ ೩೨ ರ ವರೆಗೆ ಯಾವುದೇ ವಿಂಶೋತ್ತರಿ ಮಹಾದಶೆ ಅಂತರ ದಶೆ ಬಂದರೂ ಹಾಗೂ ಗೋಚರಿಕೆಯಿಂದ ಯಾವುದೇ ಗ್ರಹ ಅಶುಭ ಬಂದರೂ ಏನೂ ಅಶುಭ ಪರಿಣಾಮವಾಗಲಾರದು. ಇದಕ್ಕೆ ಕಾರಣ ವಿಷ್ಟೇ ಮೊದಲನೇದಾಗಿ ವಯಸ್ಸಿನ ೧೨ ರಿಂದ ೩೨ ರ ವರೆಗೆ ಶುಕ್ರನ ನೈಸರ್ಗಿಕ ದಶೆಯಿರುತ್ತದೆ. ಎರಡನೇದಾಗಿ ೨೪ ರ ನಂತರ ಶುಕ್ರನ ಭಾಗ್ಯೋದಯ ಕಾಲ ಇರುತ್ತದೆ. ಆದುದರಿಂದ ಭಾಗ್ಯೋದಯ ಕಾಲ ಹಾಗೂ ನೈಸರ್ಗಿಕ ದಶೆಗಳು ಶುಭವಿದ್ದರೆ ವಿಂಶೋತ್ತರೀ ದಶಾ ಅಂತರದಶೆಗಳ ಅಶುಭ ಪರಿಣಾಮ ಹಾಗೂ ಗೋಚರೀ ಗ್ರಹಗಳ ಅಶುಭ ಪರಿಣಾಮ ಕೂಡ ಅಶುಭ ಆಗಲಾರದು.

# ಆಕಸ್ಮಿಕ ಧನಯೋಗದ ಬಗ್ಗೆ ಕೆಲವು ಅನುಭವಿಕ ನಿಯಮಗಳು

(೧) ಪಂಚಮ ಸ್ಥಾನದಲ್ಲಿ ಬಲಾಢ್ಯ ಗುರುವಾಗಲಿ ಶುಕ್ರನಾಗಲಿ ಇದ್ದರೆ ಸರ್ಕಾರದಿಂದ ಬಹುಮಾನ ಸಿಗುತ್ತದೆ.

(೨) ಅಷ್ಟಮ ಸ್ಥಾನದಲ್ಲಿ ಬಲಾಢ್ಯ ಗುರು ಇದ್ದರೆ ಮೃತ್ಯುಪತ್ರದಿಂದಾಗಲೀ ವಾರ್ಸಾದಿಂದಾಗಲೀ ಆಕಸ್ಮಿಕ ಧನಲಾಭವಾಗುತ್ತದೆ.

(೩) ಬಲಾಢ್ಯ ರವಿ ದಶಮದಲ್ಲಿದ್ದರೆ ನೌಕರಿಯಲ್ಲಿ ಬಹುಬೇಗ ಬಡತಿ ಸಿಗುವದಲ್ಲದೆ ವರಿಷ್ಠ ಅಧಿಕಾರಿಗಳಾಗುವರು.

(೪) ಬಲಾಢ್ಯ ಮಂಗಳನು ದಶಮದಲ್ಲಿದ್ದರೆ ಅಧಿಕಾರವನ್ನು ಕೊಡುವನು.

(೫) ಬಲಾಢ್ಯ ಶುಕ್ರನು ಷಷ್ಠಸ್ಥಾನದಲ್ಲಿ[illegible]ರೆ, ಷಷ್ಠಾಧೀಶನು ಬಲವಂತನಿದ್ದರೆ ವಾರ್ಸಾ ಹಕ್ಕಿನಿಂದ ವಯಸ್ಸಿನ ೫ ರಿಂದ ೪೨ ರ ವರೆಗೆ ಧನ ಪ್ರಾಪ್ತಿಯಾಗುತ್ತದೆ.

(೬) ಶುಕ್ರನು ಅಷ್ಟಮದಲ್ಲಿದ್ದು, ಅಷ್ಟಮಾಧೀಶನು ೧-೩-೬-೧೦-೧೧ ಈ ಸ್ಥಾನದಲ್ಲಿ ಬಲವಂತನಿದ್ದರೆ ಆ ವ್ಯಕ್ತಿಗೆ ಲಾಟರಿಯಿಂದ ಅಚಾನಕ ಧನಲಾಭವಾಗುತ್ತದೆ.

(೭) ಬಲಾಢ್ಯ ಶುಕ್ರನು ದ್ವಾದಶದಲ್ಲಿದ್ದು, ದ್ವಾದಶಾಧೀಶನು ೪-೫-೯-೧೧ ಈ ಸ್ಥಾನದಲ್ಲಿ ಬಲವಂತನಿದ್ದರೆ ಮಿತ್ರವರ್ಗದವರಿಂದಾಗಲೀ ವಾರ್ಸಾ ನಿಂದಾಗಲೀ ಅಚಾನಕ ದ್ರವ್ಯಲಾಭವಾಗುತ್ತದೆ.

(೮) ತೃತಿಯೇಶ ಹಾಗೂ ಲಾಭೇಶರ ಅನ್ಯೋನ್ಯ ಯೋಗ ಅಥವಾ ಶುಭಸಂಬಂಧಯೋಗವಿದ್ದರೆ, ಮಿತ್ರರಿಂದಾಗಲೀ ಸಮಾಜದ ಪ್ರತಿಷ್ಟಿತ ಜನರಿಂದಾಗಲೀ ಸಂಘ ಸಂಸ್ಥೆ ಗಳಿಂದಾಗಲೀ ಧನಲಾಭವಾಗುತ್ತದೆ.

(೯) ಮಿಥುನದ ಶುಕ್ರನು ಲಗ್ನದಲ್ಲಿ ಅಥವಾ ಕನ್ಯಾರಾಶಿಯು ಬುಧನು ಚತುರ್ಥದಲ್ಲಿದ್ದು, ಅಷ್ಟಮ ಸ್ಥಾನದಲ್ಲಿ ಮಂಗಳನಿದ್ದರೆ ಆ ವ್ಯಕ್ತಿಗೆ ರೇಸ್, ಹಾಗೂ ಸಟ್ಟಾ ಲಾಟರೀಗಳಿಂದ ಅಚಾನಕ ಧನಲಾಭವಾಗುತ್ತದೆ.

(೧೦) ಲಗ್ನೇಶ, ಧನೇಶ, ಹಾಗೂ ಚತುರ್ಥೇಶ ಇವರ ಪರಸ್ಪರ ವಿಕ್ಷಿಸಲ್ಪಟ್ಟು ಚಂದ್ರ ಹಾಗೂ ಮಂಗಳ ಬಲವಂತನಿದ್ದರೆ, ಹೊಲ-ಮನೆ, ಇಮಾರತು, ಸ್ಥಾವರ, ಇಸ್ಟೇಟ, ತೋಟಪಟ್ಟಿ, ಮುಂತಾದವುಗಳಿಂದ ದ್ರವ್ಯ ಲಾಭವಾಗುತ್ತದೆ.

(೧೧) ಲಗ್ನೇಶ, ಅಥವಾ ಧನೇಶರ ಕೇಂದ್ರದಲ್ಲಿ ಬಲವಂತನಿದ್ದು, ನವಮೇಶ ಹಾಗೂ ಚತುರ್ಥೇಶ ಪರಸ್ಪರ ನೋಡಲ್ಪಡುತ್ತಿದ್ದು ಚತುರ್ಥ, ಸ್ಥಾನದಲ್ಲಿ ಬಲವಂತ ಶುಕ್ರನಿದ್ದರೆ ಅನೇಕ ಜನರಿಂದ ಆಕಸ್ಮಿಕ ಧನಲಾಭವಾಗುತ್ತದೆ.

(೧೨) ಉಚ್ಚ ಶಕ್ರನು ಷಷ್ಠದಲ್ಲಿದ್ದು ಷಷ್ಠಾಧೀಶನು ಬಲಾಢ್ಯನಿದ್ದರೆ ಶತ್ರುಗಳಿಂದ ಅಚಾನಕ ಧನಲಾಭವಾಗುತ್ತದೆ.

(೧೩) ಮೇಷ, ಸಿಂಹ, ಧನು ಈ ಯಾವುದೇ ಲಗ್ನಗಳಿದ್ದು, ಗುರು, ರವಿ, ಮಂಗಳ ಕೇಂದ್ರ, ತ್ರಿಕೋಣದಲ್ಲಿದ್ದರೆ ( ಬಲಾಢ್ಯರಾಗಿ) ನಿಶ್ಚಿತವಾಗಿ ಸರ್ಕಾರದಿಂದ ಬಹುಮಾನ ಸಿಗುತ್ತದೆ.

(೧೪) ನೌವಮಾಧೀಶನು ಲಗ್ನದಲ್ಲಿದ್ದು, ಲಗ್ನಾಧೀಶನು ಪಂಚಮದಲ್ಲಿದ್ದರೆ ಪುತ್ರರಿಂದಾಗಲ್ಲೀ ಸರ್ಕಾರದಿಂದಾಲೀ ದ್ರವ್ಯಲಾಭವಾಗುತ್ತದೆ.

(೧೫) ಲಗ್ನಾಧೀಶ ಹಾಗೂ ಪಂಚಮಾಧೀಶ ಇವರ ಪರಸ್ಪರ ಮಿತ್ರರಿದ್ದು ಅಥವಾ ಬಲವಂತರಿದ್ದರೆ ಆ ವ್ಯಕ್ತಿಗೆ ಪುತ್ರಸಂತಾನವಾದ ಮೂರನೆ ವರ್ಷದಿಂದ ಧನಲಾಭವಾಗುತ್ತದೆ.

(೧೬) ಸಪ್ತಮದಲ್ಲಿ ಉಚ್ಚರಾಶಿಯು ರವಿ ಇದು, ದಶಮದಲ್ಲಿ ಗುರು ಷಷ್ಠದಲ್ಲಿ ಶುಕ್ರನಿದ್ದ, ಚಂದ್ರನು ವೃಷಭ ಇಲ್ಲವೆ ಕರ್ಕದಲ್ಲಿದ್ದ ವ್ಯಕ್ತಿಯು ಲಕ್ಷಾಧೀಶನಾಗುತ್ತಾನೆ.

(೧೭) ದಶಮಾಧೀಶನು ಕೇಂದ್ರ, ಇಲ್ಲವೆ ತ್ರಿಕೋಣದಲ್ಲಿದ್ದು, (ಬಲಾಢ್ಯನಾಗಿ) ಲಗ್ನಾಧೀಶನ ತೃತಿಯು ಇಲ್ಲವೆ ಲಾಭದಲ್ಲಿದ್ದರೆ ಇಂಥ ವ್ಯಕ್ತಿಗೆ ಸರ್ಕಾರದಿಂದ ಲಾಭವಾಗುತ್ತದೆ.

(೧೮) ದಶಮಸ್ಥಾನದಲ್ಲಿ ಬಲಾಢ್ಯ ಗುರು ಇದ್ದರೆ, ಉದ್ಯೋಗದಲ್ಲಿ ಮಾನ-ಸನ್ಮಾನ ದೊರೆಯುತ್ತದೆ.

(೧೯) ಬಲಾಢ್ಯ ಗುರು ಆಗಲೀ ಶುಕ್ರನಾಗಲೀ ಧನಸ್ಥಾನದಲ್ಲಿದ್ದರೆ ಪಿತ್ರಾರ್ಜಿತ ಆಸ್ತಿ ಸಿಗುತ್ತದೆ.

(೨೦) ಗುರುವಿನಿಂದ ಶುಭಯೋಗವನ್ನು ಮಾಡಲ್ಪಟ್ಟ ರವಿಯಾಗಲಿ ಚಂದ್ರನಾಗಲೀ ಕೇಂದ್ರ, ತ್ರಿಕೋಣದಲ್ಲಿದ್ದರೆ ಸರ್ಕಾರದಿಂದ ಆಕಸ್ಮಿಕವಾಗಿ ಧನಲಾಭವಾಗುತ್ತದೆ.

(೨೧) ಬಲಾಢ್ಯ ಚಂದ್ರ ಇಲ್ಲವೆ ಶುಕ್ರರ ಚತುರ್ಥದಲ್ಲಿದ್ದರೆ ಭೂಗತ ದ್ರವ್ಯ ಇಲ್ಲವೆ ವಾರ್ಸಾ, ದತ್ತಕ, ಇಲ್ಲವೆ ಸ್ಥಾವರ ಇಸ್ಟೇಟಿನಿಂದ ಅಚಾನಕ ದ್ರವ್ಯಲಾಭದಾಗುತ್ತದೆ.

(೨೨) ಬಲಾಢ್ಯ ಗುರುವಾಗಲೀ ಶುಕ್ರನಾಗಲೀ ಸಪ್ತಮದಲ್ಲಿದ್ದರೆ ಪತ್ನಿಯಿಂದ ಧನಲಾಭವಾಗುತ್ತದೆ.

(೨೩) ಭಾಗ್ಯೇಶನು ಸಪ್ತಮದಲ್ಲಿದ್ದರೆ ಹಾಗೂ ಸಪ್ತಮೇಶನು ಭಾಗ್ಯದಲ್ಲಿದ್ದರೆ ಪತ್ನಿಯಿಂದ ಲಾಭವಾಗುತ್ತದೆ.

(೨೪) ಲಾಭೇಶ ಭಾಗ್ಯದಲ್ಲಿ ಹಾಗೂ ಭಾಗ್ಯೇಶ ಲಾಭದಲ್ಲಿದ್ದರ ಉತ್ತಮ ಧನಪ್ರಾಪ್ತಿಯಾಗುತ್ತದೆ.

(೨೫) ಧನೇಶ ಲಾಭದಲ್ಲಿ ಹಾಗೂ ಲಾಭೇಶನು ಧನ ಸ್ಥಾನದಲ್ಲಿ ಅಥವಾ ಧನೇಶನು ಭಾಗ್ಯದಲ್ಲಿ ಹಾಗೂ ಭಾಗ್ಯೇಶನು ಧನಸ್ಥಾನದಲ್ಲಿದ್ದರೆ ಆಕಸ್ಮಿಕ ಧನಲಾಭವಾಗುತ್ತದೆ.

(೨೬) ಧನೇಶನು ಧನಸ್ಥಾನದಲ್ಲಿ ಲಗ್ನೇಶ ಲಗ್ನಸ್ಥಾನದಲ್ಲಿ ಭಾಗ್ಯೇಶ ಭಾಗ್ಯಸ್ಥಾನದಲ್ಲಿ ಲಾಭೇಶ ಲಾಭದಲ್ಲಿ ಈ ಯೋಗದಲ್ಲಿ ಹುಟ್ಟಿದ ವ್ಯಕ್ತಿಯು ಸಾಕ್ಷಾತ್ ಲಕ್ಷ್ಮೀಪುತ್ರನು.

(೨೭) ಜಾತಕದಲ್ಲಿ ೫ ಗ್ರಹಗಳು ಸ್ವಕ್ಷೇತ್ರದಲ್ಲಿದ್ದರೆ ಅಥವಾ ೩ ಗ್ರಹಗಳು ಸ್ವಕ್ಷೇತ್ರ ಹಾಗೂ ೨ ಗ್ರಹಗಳು ಉಚ್ಚ ರಾಶಿಯಲ್ಲಿದ್ದರೆ ಆ ಜಾತಕನು ಲಕ್ಷಾಧೀಶನಾಗುವನು.

(೨೮) ಕರ್ಕ ರಾಶಿಯು ಗುರು-ಚಂದ್ರರ ಯೋಗ ಭಾಗ್ಯದಲ್ಲಿ ಇಲ್ಲವೇ ಮೀನ ರಾಶಿಯು ಗುರು-ಚಂದ್ರರ ಯೋಗ ಪಂಚಮದಲ್ಲಿ ಇದ್ದ ಜಾತಕನಿಗೆ ಹಣದ ಕೊರತೆ ಯಾವಾಗಲೂ ಬರುವದಿಲ್ಲ.

(೨೯) ಉಚ್ಚ ಇಲ್ಲವೇ ಸ್ವಕ್ಷೇತ್ರರಾದ ಗುರು, ಶುಕ್ರ, ಚಂದ್ರರು ಅಷ್ಟಮಸ್ಥಾನದಲ್ಲಿದ್ದರೆ ವಾರಸಾ ಇಲ್ಲವೇ ಬಕ್ಷೀಸನಿಂದ ಧನಪ್ರಾಪ್ತಿ ಆಗುತ್ತದೆ.

(೩೦) ಮಿಥುನ ರಾಶಿಯು ರಾಹು-ಬುಧರ ಯೋಗವು ಅಷ್ಟಮದಲ್ಲಿದ್ದರೆ ಕಂಟ್ರಾಕ್ಟ ಮೊದಲಾದ ಠೋಕ ರೀತಿಯ ವ್ಯಾಪಾರದಿಂದ ಧನಪ್ರಾಪ್ತಿ ಆಗುತ್ತದೆ.

(೩೧) ತುಲಾರಾಶಿಯು ಪಂಚಮದಲ್ಲಿ ಶುಕ್ರ-ಶನಿಯರ ಯೋಗವಿದ್ದರೆ ಬರ್ಮಾಶೆಲ್ಲ ಮುಂತಾದ ಎಣ್ಣೆಯ ಏಜನ್ಸಿಯಿಂದ ಧನಪ್ರಾಪ್ತಿ ಆಗುತ್ತದೆ.

(೩೨) ತುಲಾರಾಶಿಯ ಭಾಗ್ಯಸ್ಥಾನದಲ್ಲಿ ಬುಧ ಶುಕ್ರರ ಯೋಗವಿದ್ದರೆ ಯಾವುದೇ ಏಜೆನ್ಸಿ ಇಲ್ಲವೇ ಕಮೀಶನ ರೀತಿಯಿಂದ ಹೇರಳ ಧನಪ್ರಾಪ್ತಿ ಆಗುತ್ತದೆ.



# ೧೦

# ಆಕಸ್ಮಿಕ ಧನಯೋಗದ ಮಾದರಿಯ ಕುಂಡಲಿಗಳು

ಈ ಪ್ರಕರ್ಣದಲ್ಲಿ ಅಭ್ಯಾಸಕ್ಕೆ ಉಪಯುಕ್ತವಾಗುವಂತೆ ಕೆಲವು ಮಾದರೀ ಕುಂಡಲಿಗಳನ್ನು ಕೊಟ್ಟು ವಿವೇಚಿಸಿದ್ದೇನೆ.

ಮಾದರಿ ೧. ಲಾಟರಿಯಿಂದ ಧನಲಾಭದ ಲಗ್ನ ಕುಂಡಲಿ

| | | | |
|---|---|---|---|
| | ಲಗ್ನ | | |
| ರಾಹು | | | ಗುರು ಚಂದ್ರ |
| ಬುಧ | | | ಕೇತು |
| ಮಂಗಳ ರವಿ | | ಶುಕ್ರ ಶನಿ | |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ. ಮೊದಲು ಈ ಜಾತಕದ ಧನಯೋಗವನ್ನೂ ಆಕಸ್ಮಿಕ ಧನಯೋಗವನ್ನೂ ಜಾತಕದ ಯೋಗ್ಯತೆಯನ್ನೂ ಪರಿಶೀಲಿಸಿರಿ.

ಲಗ್ನೇಶ ಹಾಗೂ ಪಂಚಮೇಶರ ಹಾಗೂ ಅಷ್ಟಮೇಶರ ಯೋಗವು ಭಾಗ್ಯದಲ್ಲಿ ಇರುತ್ತದೆ. ಮತ್ತು ಭಾಗ್ಯೇಶ ಹಾಗೂ ಸುಖೇಶರ ಶುಭಯೋಗವು ಸುಖಸ್ಥಾನದಲ್ಲಿ ಇರುತ್ತದೆ.

ಈ ಜಾತಕಕ್ಕೆ ಆಕಸ್ಮಿಕ ಧನಯೋಗಕಾರಕರಾದ ರವಿ, ಮಂಗಳರು ಭಾಗ್ಯದಲ್ಲಿ ಬಲಾಢ್ಯರಿದ್ದಾರೆ. ಮತ್ತು ಧನೇಶ, ಲಾಭೇಶರ, ಶುಭಸಂಬಂಧವು ಸಪ್ತಮದಲ್ಲಿದ್ದು, ಬಲಿಷ್ಠರಿದ್ದಾರೆ. ಆದುದರಿಂದ ಈ ಜಾತಕಕ್ಕೆ, ಆಕಸ್ಮಿಕ ಧನಪ್ರಾಪ್ತಿ ಇರುತ್ತದೆ.

ಲಾಟರೀ ಯೋಗಕಾರಕನಾದ ಮಂಗಳನು ಪಂಚಮೇಶನೊಂದಿಗೆ ಭಾಗ್ಯದಲ್ಲಿದ್ದಾನೆ. ಮತ್ತು ಲಾಭದಲ್ಲಿ ರಾಹು ಇದ್ದಾನೆ. ಈ ಕಾರಣಗಳ ಮೂಲಕ ಈ ಜಾತಕನಿಗೆ ಆಕಸ್ಮಿಕ ಧನಪ್ರಾಪ್ತಿಯಾಗಿದೆ.

ಮಾದರಿ ೨. ಲಾಟರಿಯಿಂದ ಧನಲಾಭದ ಲಗ್ನ ಕುಂಡಲಿ

| | | | |
|---|---|---|---|
| | | ಚಂ | ಕೇ |
| ಶ | | | |
| | | | ರ<br>ಶು |
| ಗು<br>ರಾ<br>ಮಂ | ಲಗ್ನ | | ಬು |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ.

ಈ ಜಾತಕದ ಧನಯೋಗವನ್ನು ಆಕಸ್ಮಿಕ ಧನಯೋಗವನ್ನು ಜಾತಕದ ಯೋಗ್ಯತೆಯನ್ನೂ ಪರಿಶೀಲಿಸಿರಿ.

ಲಗ್ನೇಶ ಹಾಗೂ ಧನೇಶ ಪಂಚಮೇಶ, ಇವರ ಶುಭಸಂಬಂಧಯೋಗವು ಧನಸ್ಥಾನದಲ್ಲಿದ್ದು, ಭಾಗ್ಯೇಶನು ಉಚ್ಚನಾಗಿ ಕೇಂದ್ರದಲ್ಲಿದ್ದಾನೆ. ಸುಖೇಶನು ಸುಖಸ್ಥಾನದಲ್ಲಿಯೇ ಇದ್ದಾನೆ.

ಈ ಜಾತಕಕ್ಕೆ ಆಕಸ್ಮಿಕ ಧನಯೋಗಕಾರಕರಾದ ಬುಧ, ಗುರು, ಶುಕ್ರರು ಬಲಾಢ್ಯರಾಗಿ ಲಾಭ ಹಾಗೂ ಧನಸ್ಥಾನದಲ್ಲಿದ್ದಾರೆ. ಆದುದರಿಂದ ಈ ಜಾತಕಕ್ಕೆ ಆಕಸ್ಮಿಕ ಧನಪ್ರಾಪ್ತಿ ಯೋಗವಿರುತ್ತದೆ.

ಲಾಟರೀ ಯೋಗಕಾರಕನಾದ ಮಂಗಳನು ಬಲಾಢ್ಯನಾಗಿ ಹಾಗೂ ಪಂಚಮೇಶ ಹಾಗೂ ಧನೇಶನಾದ ಗುರುವಿನೊಂದಿಗೆ ಧನಸ್ಥಾನದಲ್ಲಿದ್ದಾನೆ. ಅಷ್ಟಮೇಶನಾದ ಬುಧನು ಲಾಭದಲ್ಲಿ ಉಚ್ಚನಾಗಿದ್ದಾನೆ. ಈ ಕಾರಣಗಳ ಮೂಲಕ ಈ ಜಾತಕನಿಗೆ ಲಾಟರಿಯಿಂದ ಧನಪ್ರಾಪ್ತಿಯಾಗಿದೆ.

ಮಾದರಿ ೩. ರೇಸಿನಿಂದ ಲಾಭದ ಲಗ್ನ ಕುಂಡಲಿ.

| | | | |
|---|---|---|---|
| | | | ಕೇ |
| ಶ | | | |
| | | | ಮಂ |
| ರಾ<br>ಗು. ಚಂ. | ರ | ಲಗ್ನ<br>ಶು. ಬು | |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ.

ತೃತೀಯೇಶ ಹಾಗೂ ದಶಮೇಶರ ಶುಭಯೋಗವು ತೃತೀಯದಲ್ಲಿಯೂ ಲಗ್ನೇಶನು ಬಲಾಢ್ಯನಿದ್ದು, ಬಲಾಢ್ಯ ಪಂಚಮೇಶನೊಂದಿಗೆ ತ್ರಿಕೋಣ ಯೋಗವನ್ನು ಮಾಡುತ್ತಿದ್ದಾನೆ. ಆದರಿಂದ ಈ ಜಾತಕಕ್ಕೆ ಉತ್ತಮ ಧನ ಯೋಗವಿರುತ್ತದೆ.

ಆಕಸ್ಮಿಕ ಧನಯೋಗಕಾರಕರಾದ ಶನಿ-ಶುಕ್ರರು ಬಲಾಢ್ಯರಾಗಿ ಶುಭ ಯೋಗವನ್ನು ಮಾಡುತ್ತಿದ್ದಾರೆ. ಮತ್ತು ಲಾಭಯೋಗಕಾರಕರಾದ ರವಿ ಮಂಗಳರು ಅನ್ಯೋನ್ಯ ರಾಶಿಯಲ್ಲಿದ್ದು, ಲಾಭ ಹಾಗೂ ಧನದಲ್ಲಿದ್ದಾರೆ. ಈ ಕಾರಣದಿಂದ ಈ ಜಾತಕನಿಗೆ ಆಕಸ್ಮಿಕ ಧನಪ್ರಾಪ್ತಿಯೋಗವಿರುತ್ತದೆ.

ರೇಸಯೋಗಕಾರಕರಾದ ರವಿ, ಶುಕ್ರ, ಚಂದ್ರರು ಬಲಾಢ್ಯರಿದ್ದಾರೆ. ಮತ್ತು ರೇಸ ರಾಶಿಯಾದ ಧನು ರಾಶಿಯಲ್ಲಿ ಗುರು-ಚಂದ್ರರ ಯೋಗವಿರುತ್ತದೆ. ಈ ಕಾರಣದಿಂದ ಈ ಜಾತಕನಿಗೆ ರೇಸದಿಂದ ಲಾಭವಾಗಿದೆ.

ಮಾದರಿ ೪. ರೇಸಿನಿಂದ ಲಾಭದ ಲಗ್ನಕುಂಡಲಿ.

| | | | |
|---|---|---|---|
| | | | ಆ |
| ಲಗ್ನ ಶ | | | ಕೇ |
| ರಾ | | | ರ ಮಂ |
| ಚಂ | ಗು | ಶು | ಬು |

ಮೇಲೆ ತೋರಿಸಿದ ಜಾತಕವನ್ನು ಪರಿಶೀಲಿಸಿರಿ.

ಈ ಜಾತಕದ ಧನಯೋಗ ಹಾಗೂ ಆಕಸ್ಮಿಕ ಧನಯೋಗವನ್ನು ವಿವರಿಸಿರಿ.

ಈ ಜಾತಕಕ್ಕೆ ಮಾಲಾಯೋಗವಿರುತ್ತದೆ. ಎರಡನೇಯದಾಗಿ ಲಗ್ನೇಶ ಹಾಗೂ ಲಾಭೇಶ ಭಾಗ್ಯೇಶರು ಬಲಿಷ್ಠರಾಗಿದ್ದಾರೆ. ಹಾಗೂ ಅನೇಕ ಗ್ರಹಗಳು ಉದಿತ ಗೋಲಾರ್ಧದಲ್ಲಿ ಇವೆ.

ಈ ಜಾತಕಕ್ಕೆ ಆಕಸ್ಮಿಕ ಧನಯೋಗಕಾರಕನಾದ ಗುರುವು ಕೇಂದ್ರದಲ್ಲಿದ್ದಾನೆ.

ರೇಸಯೋಗಕಾರಕರಾದ ರವಿ, ಚಂದ್ರ, ಶುಕ್ರರು ಬಲಾಢ್ಯರಿದ್ದು, ಲಾಭ, ಭಾಗ್ಯ, ಸಪ್ತಮದಲ್ಲಿದ್ದಾರೆ. ಈ ಕಾರಣದಿಂದ ಈ ಜಾತಕನಿಗೆ ರೇಸದಿಂದ ಲಾಭವಾಗಿದೆ.

## ಪ್ರಾಯಿಜ ಬಾಂಡನಿಂದ ಧನಲಾಭ- ಅಥವಾ ಸರಕಾರದಿಂದ ಬಹುಮಾನ

ಮಾದರಿ ೫. ಲಗ್ನ ಕುಂಡಲಿ

| | | | |
|---|---|---|---|
| ಗು ಚಂ | | | |
| ಕೇ | | | |
| ಶ | | | ರ. ಮ ರಾ |
| ಲಗ್ನ | | ಶು | ಬು |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ. ಮೊದಲು ಈ ಜಾತಕದ ಧನಯೋಗವನ್ನೂ ಮತ್ತು ಆಕಸ್ಮಿಕ ಧನಯೋಗವನ್ನೂ ಪರಿಶೀಲಿಸಿರಿ. ಈ ಜಾತಕಕ್ಕೆ ಗುರು, ಬುಧ, ರವಿ ಯೋಗಕಾರಕ ಗ್ರಹಗಳಿದ್ದು, ಈ ಜಾತಕದಲ್ಲಿ ಈ ಮೂರೂ ಗ್ರಹಗಳು ಬಲಾಢ್ಯರಿದ್ದಾರೆ.

ಈ ಜಾತಕಕ್ಕೆ ಆಕಸ್ಮಿಕ ಯೋಗಕಾರಕ ಗ್ರಹಗಳಾದ ಮಂಗಳ, ಚಂದ್ರರರೂ ಬಲಿಷ್ಠರಿದ್ದಾರೆ.

ಪ್ರಾಯಿಜ ಬಾಂಡ ಅರ್ಥಾತ್ ಸರಕಾರದಿಂದ ಬಹುಮಾನ ಹೊಂದಲು ರವಿ, ಗುರು ಭಾಗ್ಯೇಶ ಇವರ ಬಲಾಬಲವನ್ನು ಅವಲಂಬಿಸಿರುತ್ತದೆ. ಈ ಜಾತಕಕ್ಕೆ ರವಿಯೂ ಭಾಗ್ಯೇಶನಿದ್ದು, ಪಂಚಮೇಶನೊಂದಿಗೆ ಭಾಗ್ಯದಲ್ಲಿದ್ದಾನೆ. ಅಷ್ಟಮೇಶನಾದ ಚಂದ್ರನು ಲಗ್ನೇಶ ಹಾಗೂ ಚತುರ್ಥೇಶನಾದ ಗುರುವಿನೊಂದಿಗೆ ಚತುರ್ಥದಲ್ಲಿದ್ದಾನೆ. ಆದ್ದರಿಂದ ಈ ಜಾತಕನಿಗೆ ಸರಕಾರದಿಂದ ಬಹುಮಾನ ಸಿಗುತ್ತದೆ.

ಮಾದರಿ ೬ ಲಗ್ನ ಕುಂಡಲಿ.

| | | | |
|---|---|---|---|
| | ಬು ರ | ಶು ಚಂ | ಕೇ |
| ಶ | | | |
| | | | ಲಗ್ನ |
| ಮಂ ರಾ | ಗು | | |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ. ಮೊದಲು ಈ ಜಾತಕದ ಧನಯೋಗವನ್ನು ಹಾಗೂ ಆಕಸ್ಮಿಕ ಧನಯೋಗವನ್ನು ಪರಿಶೀಲಿಸಿರಿ. ಲಗ್ನೇಶನು ಉಚ್ಚನಾಗಿ ಭಾಗ್ಯದಲ್ಲಿಯೂ ಭಾಗ್ಯೇಶನು ಪಂಚಮದಲ್ಲಿದ್ದು, ಚತುರ್ಥೇಶನೊಂದಿಗೆ ಅನ್ಯೋನ್ಯ ಯೋಗ ಮಾಡುತ್ತಿದ್ದಾನೆ.

ಈ ಜಾತಕಕ್ಕೆ ಆಕಸ್ಮಿಕ ಧನಯೋಗಕಾರಕನಾದ ಗುರುವು ಚತುರ್ಥದಲ್ಲಿದ್ದು, ದಶಮೇಶನೊಂದಿಗೆ ಪ್ರತಿಯೋಗವನ್ನು ಮಾಡುತ್ತಿದ್ದಾನೆ. ಹಾಗೂ ಗುರು-ಚಂದ್ರರ ಪ್ರತಿಯೋಗ ಸಹ ಇದೆ. ಧನೇಶ ಲಾಭೇಶನಾದ ಬುಧನು ಲಗ್ನೇಶನೊಂದಿಗೆ ಭಾಗ್ಯದಲ್ಲಿದ್ದಾನೆ.

ಪ್ರಾಯಿಜ ಬಾಂಡಿನ ಯೋಗಕಾರಕನಾದ ರವಿ, ಗುರು, ಹಾಗೂ ಭಾಗ್ಯೇಶ ಇವರು ಬಲಾಢ್ಯರಿರುವ ಮೂಲಕ ಸರಕಾರದಿಂದ ಬಹುಮಾನವನ್ನು ದೊರೆಕಿಸುತ್ತಾರೆ.

### ಭೂಗತದಿಂದ ಧನಲಾಭ

ಮಾದರಿ ೭. ಕುಂಡಲಿ

| | | | |
|---|---|---|---|
| ರಾ | ಲಗ್ನ ರ | ಬು ಶು | |
| | | | ಗು ಚಂ |
| ಶ | | | ಮಂ |
| | | | ಕೇ |

ಮೇಲೆ ತೋರಿಸಿದ ಜಾತಕವನ್ನು ನೀರಿಕ್ಷಿಸಿರಿ. ಈ ಜಾತಕದ ಧನ ಯೋಗವನ್ನೂ ಆಕಸ್ಮಿಕ ಧನಯೋಗವನ್ನೂ ಪರಿಶೀಲಿಸಿರಿ.

ಲಗ್ನೇಶ ಪಂಚಮೇಶರ ಅನ್ಯೋನ್ಯ ಯೋಗವಿದೆ. ಮತ್ತು ಭಾಗ್ಯೇಶ ಹಾಗೂ ಚತುರ್ಥೇಶರ ಶುಭಯೋಗವು ಚತುರ್ಥದಲ್ಲಿದೆ. ಆದ್ದರಿಂದ ಇದೊಂದು ಉತ್ತಮ ಧನಯೋಗಕಾರಕ ಜಾತಕವಿರುತ್ತದೆ.

**ಜಾತಕಕ್ಕೆ** ಆಕಸ್ಮಿಕ ಧನಯೋಗಕಾರಕರಾದ ರವಿ, ಮಂಗಳರು ಬಲಾಢ್ಯರಿದ್ದಾರೆ. ಮತ್ತು ಧನೇಶ ಲಾಭೇಶರಾದ ಶನಿ, ಶುಕ್ರರು ಸಹ ಸ್ವಗೃಹದಲ್ಲಿದ್ದಾರೆ.

ಭೂಗತ ಧನಯೋಗಕಾರಕರಾದ ಚಂದ್ರ, ಮಂಗಳ ಹಾಗೂ ಚತುರ್ಥೇಶ ಶನಿ ಇರುವ ಮೂಲಕ ಭೂಗತದಿಂದ ಧನಪ್ರಾಪ್ತಿಯಾಗುವ ಜಾತಕವಿರುತ್ತದೆ.

**ಮಾದರಿ ೮. ಲಗ್ನಕುಂಡಲಿ.**

| | | | |
|---|---|---|---|
| ಗು | ಚಂ ಮಂ | | |
| ಕೇ | | | |
| ಲಗ್ನ ಶ | | | ರಾ |
| | | ಶು | ರ ಬು |

ಮೇಲೆ **ತೋರಿಸಿದ** ಜಾತಕವನ್ನು ನಿರೀಕ್ಷಿಸಿರಿ. ಈ ಜಾತಕದ ಧನಯೋಗವನ್ನು ಆಕಸ್ಮಿಕ ಧನಯೋಗವನ್ನು ಪರಿಶೀಲಿಸಿರಿ.

ಈ **ಜಾತಕಕ್ಕೆ** ಲಗ್ನೇಶನು ಲಗ್ನದಲ್ಲಿಯೂ ಭಾಗ್ಯೇಶನು ಭಾಗ್ಯದಲ್ಲಿಯೂ ದಶಮೇಶನು ದಶಮದಲ್ಲಿಯೂ ಇದ್ದಾರೆ.

ಈ ಜಾತಕಕ್ಕೆ ಆಕಸ್ಮಿಕ ಧನಯೋಗಕಾರಕರಾದ ರವಿ–ಶುಕ್ರರು ಬಲಾಢ್ಯರಿದ್ದಾರೆ. ಮತ್ತು ಲಾಭೇಶ, ಧನೇಶರು ಸಹ ಬಲಾಢ್ಯರಿದ್ದಾರೆ. ಅಷ್ಟಮೇಶ, ಭಾಗ್ಯೇಶರ ಸಂಭಯೋಗವು ಭಾಗ್ಯದಲ್ಲಿದೆ.

ಭೂಗತ ಧನಯೋಗಕಾರಕರಾದ ಚಂದ್ರ, ಮಂಗಳ, ಶುಕ್ರ ಹಾಗೂ ಚತುರ್ಥೇಶರು ಬಲ್ಯಾರಾಗಿ ಕೇಂದ್ರದಲ್ಲಿ ಯೋಗ, ಪ್ರತಿಯೋಗ ಮಾಡುತ್ತಿದ್ದಾರೆ. ಆದ್ದರಿಂದ ಭೂಗತದಿಂದ ಧನಪ್ರಾಪ್ತಿಯಾಗುವ ಜಾತಕ ವಿರುತ್ತದೆ.

ಮಾದರಿ ೯. ಸ್ವಸ್ತ್ರೀಯರಿಂದ ಲಾಭದ ನಿರಯಣ ಲಗ್ನಕುಂಡಲಿ.

| | | | |
|---|---|---|---|
| [illegible] | ಲಗ್ನ | | |
| ರ ಶು. ರಾ | | | |
| ಬು ಶ | | | ಗು ಕೇ |
| ಮಂ | | ಚಂ | |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ ಮೊದಲು ಈ ಜಾತಕ ಧನಯೋಗವನ್ನೂ ಆಕಸ್ಮಿಕ ಧನಯೋಗವನ್ನೂ ಜಾತಕದ ಯೋಗ್ಯತೆಯನ್ನೂ ಪರಿಶೀಲಿಸಿರಿ.

ಲಗ್ನೇಶನು ಭಾಗ್ಯದಲ್ಲಿಯೂ ಭಾಗ್ಯೇಶನು ಪಂಚಮದಲ್ಲಿಯೂ ಇದ್ದು, ತ್ರಿಕೋಣ ಯೋಗವನ್ನು ಮಾಡುತ್ತಿದ್ದಾರೆ. ಧನೇಶ ಹಾಗೂ ಪಂಚಮೇಶ ಹಾಗೂ ಸಪ್ತಮೇಶರ ಶುಭಸಂಬಂಧಯೋಗವು ಲಾಭದಲ್ಲಿ ಮತ್ತು ದಶಮೇಶ ಹಾಗೂ ಲಾಭೇಶನು ದಶಮದಲ್ಲಿ ಸಪ್ತಮೇಶನೊಂದಿಗೆ ಕೇಂದ್ರ ಯೋಗವನ್ನು ಮಾಡುತ್ತಿದ್ದಾನೆ. ಆದುದರಿಂದ ಈ ಜಾತಕಕ್ಕೆ ಉತ್ತಮ ಧನಯೋಗ ವಿರುತ್ತದೆ.

ಈ ಜಾತಕಕ್ಕೆ ಆಕಸ್ಮಿಕ ಧನಯೋಗಕಾರಕರಾದ ರವಿ–ಮಂಗಳರು ಹಾಗೂ ಲಾಭಯೋಗಕಾರಕರಾದ ಶುಕ್ರ, ಶನಿಯರೂ ಭಾಗ್ಯೇಶನೊಂದಿಗೆ ಶುಭಯೋಗವನ್ನು ಮಾಡುತ್ತಿರುವರು.

ಸ್ತ್ರೀಕಾರರಾದ ಶುಕ್ರ ಚಂದ್ರರು ಸಂಪೇಶ ಹಾಗೂ ಸಪ್ತಮೇಶರಾಗಿ ಭಾಗ್ಯೇಶನಾದ ಗುರುವಿನೊಂದಿಗೆ ಶುಭಯೋಗವನ್ನು ಮಾಡುತ್ತಿರುವದರಿಂದ ಸ್ತ್ರೀಯರಾದ ತಾಯಿ ಹಾಗೂ ಪತ್ನಿಯಿಂದ ಧನಪ್ರಾಪ್ತಿಯಾಗಿದೆ.

ಮಾದರಿ ೧೦. ಪತ್ನಿಯಿಂದ ಧನಲಾಭದ ಲಗ್ನ ಕುಂಡಲಿ

| | | | |
|---|---|---|---|
| ಶ | | ಚಂ | ಕೇ |
| ಗು | | | |
| | | | ಲಗ್ನ ಬುಂ |
| ರಾ | | ಶು | ರ ಮಂ |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ, ಮೊದಲು ಈ ಜಾತಕದ ಧನಯೋಗವನ್ನೂ ಮತ್ತು ಆಕಸ್ಮಿಕ ಧನಯೋಗವನ್ನೂ ಪರಿಶೀಲಿಸಿರಿ. ಈ ಜಾತಕಕ್ಕೆ ಗುರು, ಬುಧ ರವಿ ಯೋಗಕಾರಕ ಗ್ರಹಗಳಿದ್ದು, ಈ ಜಾತಕದಲ್ಲಿ ಈ ಮೂರೂ ಗ್ರಹಗಳು ಬಲಾಢ್ಯರಿದ್ದಾರೆ.

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ ಲಗ್ನೇಶ ಹಾಗೂ ಧನೇಶರ ಅನ್ಯೋನ್ಯಯೋಗ ಲಗ್ನ ಹಾಗೂ ಧನಸ್ಥಾನದಲ್ಲಿದೆ. ಮತ್ತು ಲಗ್ನೇಶ ಭಾಗ್ಯೇಶ ಹಾಗೂ ಸಂಪೇಶ ಇವರ ಯೋಗ ಧನಸ್ಥಾನದಲ್ಲಿದೆ ಈ

ಕಾರಣದಿಂದ ಇದೊಂದು ಉತ್ತಮ ಧನಯೋಗದ ಕುಂಡಲಿ (ಜಾತಕ) ಇರುತ್ತದೆ.

ಆಕಸ್ಮಿಕ ಧನಯೋಗಕಾರಕ ಗ್ರಹಗಳಾದ ಬುಧ-ಗುರುವಿನ ಪ್ರತಿಯೋಗ ಲಗ್ನ ಸಪ್ತಮದಲ್ಲಿ (ಕೇಂದ್ರದಲ್ಲಿ) ಇರುತ್ತದೆ.

ಸಪ್ತಮೇಶ ಹಾಗೂ ಅಷ್ಟಮೇಶರ ಅನ್ಯೋನ್ಯಯೋಗ ಸಪ್ತಮ ಹಾಗೂ ಅಷ್ಟಮದಲ್ಲಿ ಇರುತ್ತದೆ. ಮತ್ತು ಸ್ತ್ರೀಕಾರಕರಾದ ಶುಕ್ರ-ಚಂದ್ರರು ಬಲಾಢ್ಯರಿದ್ದು, ಗುರುವಿನೊಂದಿಗೆ ಕೇಂದ್ರ ಹಾಗೂ ತ್ರಿಕೋಣ ಯೋಗಗಳನ್ನು ಮಾಡುತ್ತಿದ್ದಾರೆ. ಈ ಕಾರಣದಿಂದ ಈ ಜಾತಕನಿಗೆ ಪತ್ನಿಯಿಂದ ಉತ್ತಮ ಧನಯೋಗವಾಗಿದೆ.

ಮಾದರಿ ೧೧. ವಾರಸಾದಿಂದ ಧನಪ್ರಾಪ್ತಿ

| | | | |
|---|---|---|---|
| ರಾ ಚಂ ಶು | ರ ಬು | | ಗು ಮಂ |
| | | | |
| | | | |
| ಲಗ್ನ ಶ | | | ಕೇ |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ. ಈ ಜಾತಕದ ಧನಯೋಗವನ್ನೂ ಆಕಸ್ಮಿಕ ಧನಯೋಗವನ್ನೂ ನೋಡಿರಿ.

ಲಗ್ನೇಶ ಧನೇಶರ ಪ್ರತಿಯೋಗ ಲಗ್ನ ಹಾಗೂ ಸಪ್ತಮದಲ್ಲಿ ಇರುತ್ತದೆ. ಮತ್ತು ಪಂಚಮೇಶ ಲಗ್ನೇಶ, ಸುಖೇಶರ ಯೋಗ ಸಪ್ತಮದಲ್ಲಿ ಆದುದರಿಂದ ಇದೊಂದು ಉತ್ತಮ ಧನಯೋಗದ ಜಾತಕ ಇರುತ್ತದೆ.

ಈ ಜಾತಕಕ್ಕೆ ಆಕಸ್ಮಿಕ ಧನಯೋಗಕಾರಕರಾದ ಚಂದ್ರ. ಮಂಗಳರು ಬಲಾಢ್ಯರಿದ್ದು, ಕೇಂದ್ರಯೋಗವನ್ನು ಮಾಡುತ್ತಾರೆ.

ವಾರಸಾ ಧನಯೋಗಕಾರಕನಾದ ಚಂದ್ರನು ಉಚ್ಚ ಲಾಭೇಶನೊಂದಿಗೆ ಸುಖಸ್ಥಾನದಲ್ಲಿದ್ದಾನೆ. ಅಂತೆಯೇ ಈ ಜಾತಕನಿಗೆ ತಾಯೀ ತವರುಮನೆಯಿಂದ ವಾರಸಾ ಧನಪ್ರಾಪ್ತಿ ಆಗಿದೆ.

ಮಾದರಿ ೭೨. ಸ್ತ್ರೀಯರಿಂದ ಧನಲಾಭದ ಲಗ್ನ ಕುಂಡಲಿ

| | | | |
|---|---|---|---|
| | | ಕೇ | ಚಂ |
| | | | |
| | | | ಲಗ್ನ ಮಂ |
| ಶು ಶ ಗೂ | ಬು ರ. ರಾ | | |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ. ಮೊದಲು ಈ ಜಾತಕದ ಯೋಗವನ್ನೂ ಆಕಸ್ಮಿಕ ಧನಯೋಗವನ್ನೂ ಪರಿಶೀಲಿಸಿರಿ.

ಲಗ್ನೇಶ ಚತುರ್ಥೇಶರ ಅನ್ಯೋನ್ಯ ಯೋಗವಿದೆ. ಹಾಗೂ ದಶಮೇಶ ಚಮೇಶ ಹಾಗೂ ಸಪ್ತಮೇಶರ ಶುಭಯೋಗವು ಪಂಚಮದಲ್ಲಿದೆ.

ಆಕಸ್ಮಿಕ ಧನಯೋಗಕಾರಕನಾದ ಗುರುವು ಪಂಚಮದಲ್ಲಿಯೂ ಧನೇಶ ಲಾಭೇಶನಾದ ಬುಧನು ಲಗ್ನೇಶನೊಂದಿಗೆ ಚತುರ್ಥದಲ್ಲಿಯೂ ಇದ್ದಾರೆ.

ಸ್ತ್ರೀಧನ ಯೋಗಕಾರಕರಾದ ಶುಕ್ರ, ಚಂದ್ರರು ಗುರುವಿನೊಂದಿಗೆ ಯುತಿಯೋಗ ಪ್ರತಿಯೋಗವನ್ನು ಮಾಡುತ್ತಿದ್ದಾರೆ. ಚತುರ್ಥೇಶನಾದ ಹಾಗೂ ರಾಜಯೋಗಕಾರಕನಾದ ಕುಜನು ಬಲಾಢ್ಯನಿರುವ ಮೂಲಕ ಈ ಜಾತಕನಿಗೆ ಸ್ವಸ್ತ್ರೀಯರಿಂದ ಲಾಭವಾಗಿದೆ.

ಮಾದರಿ ೧೩. ಪರಸ್ತ್ರೀಯರಿಂದ ಧನಲಾಭದ ಲಗ್ನಕುಂಡಲಿ.

| | | | |
|---|---|---|---|
| | | | |
| | | | ಕೇ |
| ಶ ರಾ | | | ರ |
| | ಚಂ | ಶು ಮಂ ಗು | ಬು |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿ. ಮೊದಲು ಈ ಜಾತಕದ ಧನಯೋಗವನ್ನೂ ಹಾಗೂ ಆಕಸ್ಮಿಕ ಧನಯೋಗವನ್ನೂ ಪರಿಶೀಲಿಸಿರಿ.

ಭಾಗ್ಯೇಶ, ಸಪ್ತಮೇಶ, ಅಷ್ಟಮೇಶರ ಯೋಗವು ಸಪ್ತಮದಲ್ಲಿದೆ ಪಂಚಮೇಶನು ಪಂಚಮದಲ್ಲಿದ್ದಾನೆ. ಆಕಸ್ಮಿಕ ಧನಯೋಗಕಾರಕರಾದ ರವಿ–ಮಂಗಳರು ಬಲಾಢ್ಯರಿದ್ದು, ದಶಮೇಶ. ಲಾಭೇಶನಾದ ಶನಿಯೂ ಸ್ವಗೃಹದಲ್ಲಿದ್ದಾನೆ.

ಪರಸ್ತ್ರೀ ಲಂಪಟಕಾರರಾದ ಶುಕ್ರ, ಮಂಗಳರ ಯೋಗ ಸಪ್ತಮದಲ್ಲಿಯೂ ಚಂದ್ರನು ಅಷ್ಟಮದಲ್ಲಿಯೂ ಇದ್ದು, ಧನೇಶ ಭಾಗ್ಯೇಶರ ಶುಭ

ಸಂಬಂಧವು ಸಪ್ತಮದಲ್ಲಿರುವ ಮಂಗಲಕ ಪರಸ್ತ್ರೀಯಿಂದ ಧನಯೋಗವನ್ನು ಹೊಂದುವ ಜಾತಕವಿರುತ್ತದೆ.

### ಮಾದರಿ ೧೪. ದತ್ತಕಯೋಗ.

| | | | |
|---|---|---|---|
| ಗು ಚಂ | | | |
| ಕೇ | | | |
| ಶ | | | ರ ಮಂ ರಾ |
| | ಲಗ್ನ | ಶು | ಬು |

ಮೇಲೆ ತೋರಿಸಿದ ಜಾತಕವನ್ನು ನಿರೀಕ್ಷಿಸಿರಿ. ಮೊದಲು ಈ ಜಾತಕದ ಧನಯೋಗವನ್ನೂ ಆಕಸ್ಮಿಕ ಧನಯೋಗವನ್ನೂ ಪರಿಶೀಲಿಸಿರಿ.

ಈ ಜಾತಕದ ಲಗ್ನೇಶ, ದಶಮೇಶರ ಶುಭಯೋಗ ದಶಮದಲ್ಲಿಯೂ ಪಂಚಮೇಶ (ಧನೇಶ) ಭಾಗ್ಯೇಶರ ಶುಭಯೋಗ ಪಂಚಮದಲ್ಲಿಯೂ ಇದ್ದು, ಲಾಭೇಶನೊಂದಿಗೆ ಪ್ರತಿಯೋಗವು ಇದೆ.

ಈ ಜಾತಕಕ್ಕೆ ಆಕಸ್ಮಿಕ ಧನಯೋಗಕಾರಕರಾದ ಬುಧ-ಗುರು ಉಭಯರು ಸ್ವಗೃಹದಲ್ಲಿದ್ದು, ಪಂಚಮ ಹಾಗೂ ಲಾಭದಲ್ಲಿ ಪ್ರತಿಯೋಗ ಮಾಡುತ್ತಿದ್ದಾರೆ.

ಪಂಚಮೇಶ-ಭಾಗ್ಯೇಶರ ಶುಭಯೋಗ ಪಂಚಮದಲ್ಲಿಯೂ ಲಗ್ನೇಶ ದಶಮೇಶರ ಶುಭಯೋಗ ದಶಮದಲ್ಲಿಯೂ ಇರುವ ಕಾರಣ ಮೇಲೆ ತೋರಿಸಿದ ಜಾತಕನಿಗೆ ದತ್ತಕಕ್ಕೆ ಹೋಗಿ ಲಕ್ಷಾಧೀಶನಾಗಿದ್ದಾನೆ.

# ಪರಿಶಿಷ್ಟ

ಆಕಸ್ಮಿಕ ಧನಯೋಗದ ಬಗ್ಗೆ ವಿಚಾರಿಸುವಾಗ ಕಾಲ ನಿರ್ಣಯವು ಬಹಳ ಮಹತ್ವದ್ದಿರುತ್ತದೆ. ಈ ಕಾಲ ನಿರ್ಣಯದಲ್ಲಿ ಅನೇಕ ಪ್ರಕಾರಗಳಿವೆ. ದಶಾಪದ್ಧತಿ, ದಿನ ವರ್ಷ ಪದ್ಧತಿ, ಗೋಚರೀ ಗ್ರಹಗಳ ಪರಿಭ್ರಮಣ ಇತ್ಯಾದಿ.

ಆಕಸ್ಮಿಕ ಧನಯೋಗಕಾರಕ ಗ್ರಹವೆಂದರೆ ಮಂಗಳನು (ಕುಜನು) ಗೋಚರಿಯಿಂದ ಮಂಗಳನ ಬಲಾಬಲವನ್ನೂ ನೋಡಬೇಕಾಗುತ್ತದೆ.

ಗೋಚರೀ ಗ್ರಹಗಳಲ್ಲಿ ಗುರು, ಶನಿಯರ ವಾಸ್ತವ್ಯವು ಯಾವುದೊಂದು ರಾಶಿಯಲ್ಲಿ ಬಹುದಿನಗಳ ವರೆಗೆ ಇರುವದರಿಂದ ನೈಸರ್ಗಿಕವಾಗಿ ಗುರು ಭಾಗ್ಯ ಕಾರಕನಿರುವದರಿಂದ ಶನಿಯು ಲಾಭಕಾರನಿರುವದರಿಂದ ಇವರ ಬಲಾಬಲ ವನ್ನು ನೋಡಬೇಕಾಗುತ್ತದೆ.



# ಎನ್. ಕೆ. ಜೋಗಳೇಕರರ

# ಜ್ಯೋತಿಷ್ಯ ಗ್ರಂಥಗಳು

## ೧. ವಧೂವರರ ಜ್ಯೋತಿಷ್ಯ

**ಬೆಲೆ : ರೂ. ೪-೦೦ (ಚತುರ್ಥಾವೃತ್ತಿ)**

ಈ ಗ್ರಂಥದಲ್ಲಿ ವಧೂ-ವರರ ಜನ್ಮಟಿಪ್ಪಣಿ (ಕುಂಡಲಿ) ಗಳನ್ನು ಏಕೆ ಹಾಗೂ ಹೇಗೆ ನೋಡಬೇಕು ? ನಾಡಿ. ಯೋನಿ, ಗಣ-ಕೂಟಗಳೆಂದರೇನು ? ಇವನ್ನು ಏಕೆ ಹಾಗೂ ಹೇಗೆ ನೋಡಬೇಕು ? ಮಂಗಳ (ಕುಜ) ದೋಷವೆಂದರೇನು ? ಕುಜ (ಮಂಗಳ) ದೋಷವನ್ನು ಯಾಕೆ ಹಾಗೂ ಹೇಗೆ ನೋಡಬೇಕು ? ಅಪವಾದ ಕುಜ ದೋಷವೆಂದರೇನು ? ಇದಲ್ಲದೆ ವಧೂ ವರರ ವಿವಾಹ ಕಾಲ ಯಾವುದು ? ಅದು ಯಾವ ವಯಸ್ಸಿನಲ್ಲಿ, ಯಾವ ವರುಷ ಯಾವ ತಿಂಗಳು ಎಂಬುದನ್ನು ಹೇಗೆ ಕಂಡುಹಿಡಿಯುಬೇಕು ? ಮೊದಲಾದ ವಿಷಯುಗಳನ್ನು ವಿವೇಚಿಸಲಾಗಿದೆ.

## ೨. ಆಕಸ್ಮಿಕ ಧನಯೋಗ

**ಬೆಲೆ : ರೂ. ೬-೦೦ (ಚತುರ್ಥಾವೃತ್ತಿ)**

ಈ ಗ್ರಂಥದಲ್ಲಿ ಆಕಸ್ಮಿಕ ಧನಯೋಗ ಅಂದರೇನು ? ಅದನ್ನು ಹೇಗೆ ಪರಿಶೀಲಿಸಬೇಕು ? ಇದಲ್ಲದೆ ಸಟ್ಟಾ, ಲಾಟರಿ, ರೇಸು, ಭೂಗತ, ಪ್ರಾಯಿಜ ಬಾಂಡ, ಸ್ತ್ರೀಧನ (ಸ್ವಸ್ತ್ರೀ ಹಾಗೂ ಪರಸ್ತ್ರೀ) ವಾರಸಾ, ದತ್ತಕ, ಕಾಣಿಕೆ, ಲಂಚ, ಕಾಲಾಬಜಾರ ಇವುಗಳಿಂದ ಆಕಸ್ಮಿಕ ಧನಲಾಭವನ್ನು ಹೇಗೆ ಗುರುತಿಸಬೇಕೆಂಬುದನ್ನು ಮಾದರೀ ಕುಂಡಲಿಗಳಿಂದ ವಿವರಿಸಿದೆ.

## ೩. ಸ್ತ್ರೀ ಜ್ಯೋತಿಷ್ಯ

**ಬೆಲೆ : ರೂ. ೧೦-೦೦ (ತೃತೀಯಾವೃತ್ತಿ)**

ಸ್ತ್ರೀಯರ ಜೀವನದ ಅನೇಕ ಮುಖಗಳನ್ನು ಆಧರಿಸಿ ಬರೆದ ವಿಸ್ತಾರ ಪೂರ್ವಕವಾದ ಗ್ರಂಥ. ಇದರಲ್ಲಿ ಸ್ತ್ರೀಯರ ಸ್ವಭಾವ, ಸೌಂದರ್ಯ,

ವಿವಾಹ ಕಾಲ, ಪ್ರೇಮವಿವಾಹ, ಪುನರ್ವಿವಾಹ, ಅಂತರಜಾತೀಯ ವಿವಾಹ, ಆಜನ್ಮ ಕುಮಾರಿಯೋಗ, ಘಟಸ್ಫೋಟ ವೈಧವ್ಯಯೋಗ, ಗರ್ಭಧಾರಣ, ಸಂತತಿ, ಸಂತತಿ ಸುಖ ಹಾಗೂ ಗರ್ಭಪತನಯೋಗಗಳು, ಗರ್ಭಪ್ರತಿಬಂಧವನ್ನು ಯಾರು ಮಾಡಿಕೊಳ್ಳಬೇಕು. ವಂಧ್ಯಾಯೋಗ, ವಿದ್ಯೆ, ಭಾಗ್ಯ, ಮನೋವಾಸನೆ, ಆರ್ಥಿಕ ಸ್ವಾತಂತ್ರ್ಯ, ಸ್ವಾವಲಂಬನ, ರಾಜಕಾರಣ ಪಟುತ್ವ, ಸಮಾಜ ಧುರೀಣತ್ವ ಮುಂತಾದ ವಿಷಯಗಳನ್ನು ಆಧುನಿಕ ಸಮಾಜಕ್ಕನುಸರಿಸಿ ಫಲಜ್ಯೋತಿಷ್ಯ ಶಾಸ್ತ್ರದ ಆಧಾರದ ಮೇಲಿಂದ ಹೇಗೆ ನೋಡಬೇಕೆಂಬುದನ್ನು ವಿವೇಚಿಸಿದೆ.

## ೪. ಅಜ್ಞಾತ ಜಾತಕ ದರ್ಶನ

ಬೆಲೆ : ರೂ. ೫-೦೦ (ದ್ವಿತಿಯಾವೃತ್ತಿ)

ಈ ಗ್ರಂಥದಲ್ಲಿ ಜನ್ಮವೇಳೆ-ಜನ್ಮಮಿತಿ ಸರಿಯಾಗಿ ಗೊತ್ತಿಲ್ಲದ ವ್ಯಕ್ತಿಯ ಜಾತಕವನ್ನು ಅವನ ಕರ್ಣಾವಲೋಕ, ನೇತ್ರಾವಲೋಕ, ಗದ್ದ-ಗಲ್ಲಗಳ ಪರೀಕ್ಷೆ ಮೊದಲಾದ ಮುಖ ಲಕ್ಷಣಗಳ ಮೇಲಿಂದಲೂ ನಡೆ-ನುಡಿ, ನಿದ್ರಾ ಭಂಗಿ ಅಭಿರುಚಿ, ವಾಕ್‌ಚಾತುರ್ಯ ಮುಂತಾದ ಸಂಗತಿಗಳಿಂದಲೂ ಕಂಡು ಹಿಡಿಯಬಹುದು. ಅದರಂತೆ ವ್ಯಕ್ತಿಯ ಜೀವನದಲ್ಲಿಯ ನಡೆದುಹೋದ ಘಟನೆಗಳ ಮೇಲಿಂದ ಜಾತಕವನ್ನು ಬರೆಗೆ ಹಚ್ಚಿ ನೋಡಬಹುದು. ಈ ಮೊದಲಾದ ಸಂಗತಿಗಳಿಂದ ಯೋಗ್ಯ ಜನ್ಮಪತ್ರಿಕೆ ಇಲ್ಲದವನ ಭವಿಷ್ಯ ಹೇಗೆ ಹೇಳಬೇಕೆಂಬುದನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ.

## ೫. ಸಾಡೇಸಾತಿ

ಬೆಲೆ : ರೂ. ೪-೦೦ (ತೃತೀಯಾವೃತ್ತಿ)

ಈ ಗ್ರಂಥದಲ್ಲಿ ಸಾಡೇಸಾತಿ ಅಂದರೇನು? ಸಾಡೇಸಾತಿಯನ್ನು ಹೇಗೆ ಪರಿಶೀಲಿಸಬೇಕು? ಅನುಕೂಲ, ಪ್ರತಿಕೂಲ, ಸಾಡೇಸಾತಿ ಅಂದರೇನು? ರಾಶಿ, ಸ್ಥಾನ, ಗ್ರಹಗಳು, ಭಾವ, ಭಾವೇಶ ಇವುಗಳ ಮೇಲಿಂದ ಶನಿಯು ಭ್ರಮಿಸುವಾಗ ಆಗುವ ಪರಿಣಾಮ, ದಶಾ-ಅಂತರ್ದಶೆಯು, ಸಾಡೇಸಾತಿಯ ಪರಿಣಾಮ ಅಷ್ಟಕವರ್ಗ ಪದ್ಧತಿಯಿಂದ ಸಾಡೇಸಾತಿಯ ವಿಚಾರ, ಇದಲ್ಲದೆ ೧೯೬೦ ರಿಂದ

೧೯೭೫ರ ವರೆಗೆ ಶನಿಯು ಯಾವ ರಾಶಿಯಲ್ಲಿ ಯಾವ ತಿಂಗಳಲ್ಲಿ ಎಷ್ಟು ಅಂಶ ಇರುವನು ಎಂಬುದರ ಕೋಷ್ಟಕ ಸಹ ಕೊಡಲಾಗಿದೆ.

## ೬. ಉದ್ಯೋಗ ಜ್ಯೋತಿಷ್ಯ ಭಾಗ ೧

(ನೌಕರಿಯ ಮಾರ್ಗದರ್ಶಿ)

ಬೆಲೆ : ೨೦-೦೦ (ದ್ವಿತೀಯಾವೃತ್ತಿ)

ಈ ಗ್ರಂಥದಲ್ಲಿ ನೌಕರಿಗಳಲ್ಲಿಯ ಪ್ರಕಾರಗಳು, ಕಾರಕಗ್ರಹ, ಲಗ್ನಸ್ಥಾನ, ರಾಶ್ಯಾದಿಗಳನ್ನು ಕುರಿತು ಸುದೀರ್ಘವಾಗಿ ವಿವೇಚಿಸಲಾಗಿದ್ದು, ಜ್ಯೋತಿಷ್ಯ ಶಾಸ್ತ್ರದಲ್ಲಿಯೇ ಇದೊಂದು ನೂತನ ಸಂಶೋಧನಾಗ್ರಂಥವು.

ಜೀವನ ರಂಗವನ್ನು ಪ್ರವೇಶಿಸುವ ಉದ್ಯೋಗಾರ್ಥಿಗಳಿಗೆ ಸಹಾಯವಾಗುವ, ಜ್ಯೋತಿಷ್ಯಶಾಸ್ತ್ರದ ಆಧಾರದ ಮೇಲೆ ರಚಿತವಾದಂತಹ ಸರಿಯಾದ ಗ್ರಂಥವು ಯಾವುದೊಂದೂ ಈ ವರೆಗೆ ಇರಲಿಲ್ಲ. ಈಗ ಈ 'ಉದ್ಯೋಗ ಜ್ಯೋತಿಷ್ಯ'ವು ಅಂತಹ ಉದ್ಯೋಗಾರ್ಥಿಗಳಿಗೊಂದು ಕೈದೀವಿಗೆಯಾಗಿದೆ.

ಕಾರಕೂನರು, ಟೈಪಿಸ್ಟರು, ಶೀಘ್ರಲಿಪಿಗಾರರು, ಜವಾನರು, ಇನ್ಸ್‌ಪೆಕ್ಟರರು, ಸ್ಟೋರ ಕೀಪರರು, ವೈಜ್ಞಾನಿಕ ವಿಭಾಗದ ನೌಕರರು, ಅಗ್ನಿಶಾಮಕ ದಳದ ಸಿಬ್ಬಂದಿ, ಅರ್ಥಶಾಸ್ತ್ರಜ್ಞರು, ಅಂಕಿಸಂಖ್ಯಾ ತಜ್ಞರು, ಎಂಜನಿಯರುಗಳಲ್ಲಿಯ ಪ್ರಕಾರ ಹಾಗೂ ತಾಂತ್ರಿಕ ಸಿಬ್ಬಂದಿ ಎಂದು ಮುಂತಾಗಿ ವಿವಿಧ ಖಾತೆಗಳಲ್ಲಿ ಇರುವ ಸಾಮಾನ್ಯ ಹುದ್ದೆಗಳೂ ಹಾಗೂ ಸಿವ್ಹಿಲ್ ಸರ್ವಿಸ್, ಮಿಲಿಟರಿ ಸರ್ವಿಸ್, ಆಕಾಶವಾಣಿ, ರೇಲ್ವೆ, ಅಂಚೆ ಮತ್ತು ತಂತಿ, ಸುಂಕ, ಕೇಂದ್ರ ಅಬಕಾರಿ, ವರಮಾನ ತೆರಿಗೆ, ವಾಯುಯಾನೋದ್ಯಾನ, ವಿಮಾನದಳ, ಸೈನ್ಯ, ಟಂಕಸಾಲೆ, ಆಡಿಟ ಹಾಗೂ ಅಕೌಂಟ, ಗಣಿ ಹಾಗೂ ಭೂಗರ್ಭ, ಸಚಿವಾಲಯ, ರೆವಿನ್ಯೂ, ಒಕ್ಕಲತನ, ಸಾರ್ವಜನಿಕ ಶಿಕ್ಷಣ, ವೈದ್ಯಕ ಹಾಗೂ ಆರೋಗ್ಯ, ನ್ಯಾಯ, ಪೋಲೀಸ, ಸ್ಟೇಟ ಅಕೌಂಟ್ಸ, ಅರಣ್ಯ, ಪಶುಸಂಗೋಪನ ಹಾಗೂ ಪಶುಸಂಪತ್ತು, ತೋಟಗಾರಿಕೆ, ಕಮರ್ಶಿಯಲ್ ಟ್ಯಾಕ್ಸ್, ಸಹಕಾರ ಹಾಗೂ ಮಾರ್ಕೆಟಿಂಗ್, ಕೂಲಿಕಾರ, ಸಮಾಜವಿಕಾಸ ಹಾಗೂ ಕಲ್ಯಾಣ, ಮೀನುಗಾರಿಕೆ, ಬಾರಿಟ